॥ ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೆ ॥

# ಜ್ಞಾನ ಜ್ಯೋತಿ



ವಾರ್ಷಿಕ ಪತ್ರಿಕೆ

1998 - 2001

ಸಂಪುಟ 30

ಕೆನರಾ ವೆಲ್‌ಫೇರ್ ಟ್ರಸ್ಟಿನ

## ಜನತಾ ವಿದ್ಯಾಲಯ
## ಸಂಯುಕ್ತ ಪದವಿಪೂರ್ವ ಕಾಲೇಜು

( ಚೌಕಗ್ರಾಮ ) ಕಡತೋಕಾ

ಹೊನ್ನಾವರ [ಉ. ಕ.]

॥ ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ॥

# ಜ್ಞಾನ ಜ್ಯೋತಿ



**ವಾರ್ಷಿಕ ಪತ್ರಿಕೆ**

**1998 - 2001**

**ಸಂಪುಟ 30**

ಕೆನರಾ ವೆಲ್‌ಫೇರ್ ಟ್ರಸ್ಟಿನ

## ಜನತಾ ವಿದ್ಯಾಲಯ

## ಸಂಯುಕ್ತ ಪದವಿಪೂರ್ವ ಕಾಲೇಜು

**( ಚೌಕಗ್ರಾಮ ) ಕಡತೋಕಾ**

**ಹೊನ್ನಾವರ [ಉ. ಕ.]**

ಪ್ರಕಾಶಕರು :

ಶ್ರೀ ವಿ. ವಿ. ಭಟ್ಟ, ಪ್ರಾಚಾರ್ಯರು
ಜನತಾ ವಿದ್ಯಾಲಯ ಸಂಯುಕ್ತ ಪದವಿಪೂರ್ವ ಕಾಲೇಜು, ಕಡತೋಕಾ
ಹೊನ್ನಾವರ ( ಉ. ಕ. )

ಸಂಪಾದಕ ಮಂಡಳಿ :

ಶ್ರೀ ಜಿ. ವಿ. ಭಟ್ಟ
ಶ್ರೀ ಸಿ. ಎಸ್. ಪ್ರಕಾಶ
ಶ್ರೀಮತಿ ಉಷಾ ಜಿ. ಭಟ್ಟ
ಶ್ರೀಮತಿ ಗಿರಿಜಾ ನಾಯ್ಕ
ಶ್ರೀ ಜಿ. ಆರ್. ಮಡಿವಾಳ

ಮುದ್ರಕರು :

ಶ್ರೀ ವಿನಾಯಕ ಪ್ರಿಂಟರ್ಸ್, ಕಡತೋಕಾ.

# ಪರಿವಿಡಿ

# ಸಂಪಾದಕೀಯ

ನಮ್ಮ ವಿದ್ಯಾಲಯದ ಮೂವತ್ತನೇ ಮುದ್ರಿತ ಪತ್ರಿಕೆಯಾದ "ಜ್ಞಾನ ಜ್ಯೋತಿ "ಯನ್ನು ಸಹೃದಯರ ಮುಂದೆ ಇಡಲು ತುಂಬಾ ಸಂತೋಷವೆನಿಸುತ್ತದೆ.

ವಿದ್ಯಾರ್ಥಿಗಳಲ್ಲಿರುವ ಸುಪ್ತ ಪ್ರತಿಭೆ, ಕವನ, ಕತೆ, ಪ್ರಬಂಧ ಮತ್ತು ಚುಟುಕುಗಳ ಮೂಲಕ ಅಭಿವ್ಯಕ್ತಿಗೊಳಿಸಲು ಈ "ಜ್ಞಾನ ಜ್ಯೋತಿ " ಒಂದು ಮಾಧ್ಯಮ. ವಿದ್ಯಾರ್ಥಿಗಳ ಲೇಖನಗಳಲ್ಲಿ ಅನುಕರಣೆ ಅಥವಾ ದೋಷಗಳಿರಬಹುದು. ಮುಂದಿನ ದಿನಗಳಲ್ಲಿ ಇನ್ನೂ ಹೆಚ್ಚಿನ ಗುಣಮಟ್ಟದ ಸಾಹಿತ್ಯ ಸೃಷ್ಟಿಗೆ ಈ ಲೇಖನ-ಗಳು ಪ್ರೇರಣೆ ಒದಗಿಸಬಹುದು, ಉಳಿದವರಿಗೂ ಪ್ರೇರಕವಾದೀತು. ಪತ್ರಿಕೆಯಲ್ಲಿ ಬೋಧಕರ ಕೆಲವು ಲೇಖನಗಳು ಸತ್ವ ಹೆಚ್ಚಿಸಿವೆ. ಆ ಸಾಹಿತ್ಯ ಮಾರ್ಗದರ್ಶಕವಾಗಲಿ ಎಂದು ಆಶಯ.

ಈ ಪತ್ರಿಕೆಯನ್ನು ಪ್ರಕಟಿಸುವುದಕ್ಕೆ ಸಹಕರಿಸಿದ ಎಲ್ಲ ಮಹನಿಯರಿಗೂ ಮತ್ತು ಪತ್ರಿಕೆಯನ್ನು ಶೀಘ್ರವಾಗಿ ಮುದ್ರಿಸಿಕೊಟ್ಟ ಶ್ರೀ ವಿನಾಯಕ ಪ್ರಿಂಟರ್ಸ್ ಕಡತೋಕಾ ಇದರ ನಿರ್ವಾಹಕರೆಲ್ಲರಿಗೂ ಕೃತಜ್ಞತೆಗಳು.

— **ಸಂಪಾದಕ ಮಂಡಳಿ**



# : ಶ್ರದ್ಧಾಂಜಲಿ :



## ದಿ|| ದಯಾನಂದ ನಾಡಕರ್ಣಿ

ಜನನ : ದಿನಾಂಕ : ೨೪-೧-೧೯೧೦

ಮರಣ : ದಿನಾಂಕ : ೧೮-೯-೨೦೦೦

ಕೆನರಾ ವೆಲ್ ಫೇರ್ ಟ್ರಸ್ಟಿನ ಸಂಸ್ಥಾಪಕ ಟ್ರಸ್ಟಿಗಳಾದ ಮಾನ್ಯ ಶ್ರೀ ದಯಾನಂದ ನಾಡ್ಕರ್ಣಿಯವರು ತಮ್ಮ ಬದುಕಿನುದ್ದಕ್ಕೂ ಕೆಳಸ್ತರದ ಜನರ ಬಗ್ಗೆ ವಿಶೇಷ ಕಾಳಜಿಯನ್ನು ಇಟ್ಟುಕೊಂಡು ಹೋರಾಡುತ್ತಾ ಬಂದವರು.

ಡಾ|| ದಿನಕರ ದೇಸಾಯಿ ಹಾಗೂ ಗಿರಿ ಪಿಕಳೆ ಅವರೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ರೈತ ಕೂಲಿಕಾರರ ಬಗ್ಗೆ ಇವರು ಅಂದು ನಡೆಸಿದ ಹೋರಾಟ ಅನ್ಯಾದೃಶವಾದದ್ದು.

ದಿವಂಗತ ಡಾ|| ದಿನಕರ ದೇಸಾಯಿಯವರ ಅತ್ಯಂತ ನಿಕಟ ವರ್ತಿಗಳಾದ ಇವರು ಟ್ರಸ್ಟಿನ ಸ್ಥಾಪನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿ ತಮ್ಮ ಜೀವನದುದ್ದಕ್ಕೂ ಅದರ ಏಳ್ಗೆಗಾಗಿ ಶ್ರಮಿಸಿದವರು. ತಮ್ಮ ಇಳಿ ವಯಸ್ಸಿನಲ್ಲಿಯೂ ಸಹ ಟ್ರಸ್ಟಿನ ಬಗ್ಗೆ ಅತಿಶಯ ಕಾಳಜಿಯನ್ನು ಹೊಂದಿದ್ದರು. ನಮ್ಮನ್ನು ಅಗಲಿದ ಇಂತಹ ಹಿರಿಯ ಚೇತನಕ್ಕೆ ನಮ್ಮ ಶಾಲೆಯು ಶ್ರದ್ಧಾಂಜಲಿಯನ್ನು ಸಲ್ಲಿಸುತ್ತದೆ.

ದಿನಾಂಕ : ೧೦-೩-೨೦೦೨
ಕಡತೋಕಾ

**ವಿ.ವಿ. ಭಟ್ಟ**
ಪ್ರಾಚಾರ್ಯರು
ಜನತಾವಿದ್ಯಾಲಯ, ಸಂ. ಪ.ಪೂ. ಕಾಲೇಜು
ಕಡತೋಕಾ.



ಶ್ರೀ ವಿ.ವಿ. ಭಟ್ಟ

ಪ್ರವೃತ್ತ ಪ್ರಾಚಾರ್ಯರು

ದಾಂಡೇಲಿಯ ಜನತಾ ವಿದ್ಯಾಲಯ ಸಂ. ಪ. ಪೂ. ಕಾಲೇಜಿನಲ್ಲಿ ಉಪನ್ಯಾಸಕರಾಗಿ, ಮೂರು ದಶಕಗಳಿಗೂ ಹೆಚ್ಚು ವರ್ಷಗಳ ಕಾಲ ಸೇವೆ ಸಲ್ಲಿಸಿ, ಅಪಾರ ಅನುಭವಗಳೊಂದಿಗೆ, ಜನತಾವಿದ್ಯಾಲಯ ಸಂ. ಪ. ಪೂ. ಕಾಲೇಜಿಗೆ ಪ್ರಾಚಾರ್ಯರಾಗಿ ಆಗಮಿಸಿರುವ, ಶಿಕ್ಷಣದಲ್ಲಿ ಸ್ನಾತಕರಾದ ಶ್ರೀ ವಿ.ವಿ. ಭಟ್ಟರು; ಅರ್ಥಶಾಸ್ತ್ರ ಮತ್ತು ರಾಜಕೀಯ ಶಾಸ್ತ್ರಗಳೆರಡರಲ್ಲಿಯೂ ಸ್ನಾತಕೋತ್ತರ ಪದವೀಧರರು. ಉತ್ತಮ ವಾಗ್ಮಿಗಳು, ಸಂಘಟಕರು, ಪಾದರಸದಷ್ಟು ಕ್ರಿಯಾಶೀಲರು.

ವಿದ್ಯಾಲಯದ ಉತ್ಕರ್ಷೆಗಾಗಿ ದುಡಿಯುವ ಉತ್ಸಾಹ ಉಳ್ಳವರು. ಬಂದ ಕಾರ್ಯವನ್ನು ಪೂರ್ತಿಗೊಳಿಸಿ, ಇನ್ನೊಂದು ''ಉಪನ್ಯಾಸ ಭವನ'' ಮತ್ತು ''ಮಾಹಿತಿ ಕೋಣೆ''ಗಳ ಕಾರ್ಯಗಳನ್ನು ಕೈಗೆತ್ತಿಕೊಂಡು, ತ್ವರಿತವಾಗಿ ಕೆಲಸ ಮುಂದುವರಿಸುತ್ತಿದ್ದಾರೆ.

ವಿದ್ಯಾಲಯದ ಶೈಕ್ಷಣಿಕ ಮತ್ತು ಭೌತಿಕ ಪ್ರಗತಿಗಳೆರಡರ ಕಡೆಗೂ ಲಕ್ಷ್ಯವಿಟ್ಟು, ವಿದ್ಯಾಲಯ ಶಿಸ್ತಿನಿಂದ ಮುನ್ನಡೆಯುವಂತೆ ಕಾರ್ಯವೆಸಗುತ್ತಿದ್ದಾರೆ. ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳಿಗಾಗಿ, ಹೊಸ - ಹೊಸ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತ ಅದನ್ನು ಅನುಷ್ಠಾನಿಸಲು, ಶಿಕ್ಷಕರನ್ನು ಪ್ರೋತ್ಸಾಹಿಸುತ್ತ, ವಿದ್ಯಾರ್ಥಿಗಳು ಕಲಿಕೆಯಲ್ಲಿ ಪ್ರಗತಿ ಸಾಧಿಸುವಲ್ಲಿ ಸಹಾಯಕರಾಗುತ್ತಿದ್ದಾರೆ.

ಇಂದಿನ ಯುಗದ ಅವಶ್ಯಕತೆಯಾದ, 'ಕಂಪ್ಯೂಟರ್ ಶಿಕ್ಷಣ'ವನ್ನು ಶಾಲೆಗೆ ವಿಸ್ತರಿಸಿಕೊಟ್ಟ, ನಮ್ಮ ವಿದ್ಯಾಲಯದ ಈ ನೂತನ ಅವಶ್ಯಕತೆಯನ್ನು ಕ್ಷಿಪ್ರವಾಗಿ ಪೂರೈಸಿಕೊಟ್ಟ ಧೀಮಂತರು.

ವಿದ್ಯಾಲಯದ ಹೊರನೋಟವೇ, ಅದರ ಆಂತರಿಕ ಶಿಸ್ತನ್ನೂ ಪ್ರತಿಬಿಂಬಿಸುತ್ತದೆ. ಈ ವಾಕ್ಯವನ್ನು ಪ್ರಾಮಾಣಿಕವಾಗಿ ಅನುಷ್ಠಾನಿಸುತ್ತಿರುವ ಶ್ರೀಯುತರು, ವಿದ್ಯಾಲಯದ ಪ್ರಗತಿಗಾಗಿ, ಅನುದಿನವೂ ಚಿಂತಿಸುವವರಾಗಿದ್ದಾರೆ.

ಅತ್ಯಂತ ಸರಳರೂ - ಸ್ನೇಹಶೀಲರೂ ಆಗಿರುವ ಶ್ರೀಯುತರು ಸಮರ್ಥ ಆಡಳಿತಗಾರರೂ ಆಗಿದ್ದಾರೆ.

ಪ್ರಾಚಾರ್ಯರ ಮಾರ್ಗದರ್ಶನದಲ್ಲಿ ನಮ್ಮ ವಿದ್ಯಾಲಯ ಉನ್ನತ ಮಟ್ಟಕ್ಕೇರಲಿ, ಪ್ರತಿಭಾವಂತರನ್ನು ಸೃಷ್ಟಿಸುವ ಉನ್ನತ ವಿದ್ಯಾ ಸಂಸ್ಥೆಯಾಗಲಿ ಎಂದು ಹಾರೈಸುತ್ತೇವೆ.

*ಸಂಪಾದಕ ಮಂಡಳಿ



ಶ್ರೀ ಎಸ್. ...

ನಿವೃತ್ತ ಪ್ರಾಚ...

ವಿದ್ಯಾ...
ಶಾಸ್ತ್ರ ಮತ್ತು ...
ವಿಷಯ ಬೋ...
ಶಾಲೆಯಲ್ಲಿಯ...
ತಮ್ಮ ಸೇವಾ...
ಕನ್ನಡ ಮಾಧ್ಯ...
ಕಾರ್ಯಕರ್ತ...
ಶೈಕ್ಷಣಿಕ...
ವಿವಿಧ ಚಟುವ...
ನಮ್ಮ...
ನಿರ್ಮಾಣದಲ್ಲಿ...
ಮಾನ್ಯ...
ಆಶಿಸುತ್ತೇವೆ.



**ಶ್ರೀ ಎಸ್. ಎ. ಭಟ್ಟರು**
ನಿವೃತ್ತ ಪ್ರಾಚಾರ್ಯರು

ಜನತಾ ವಿದ್ಯಾಲಯ ಬಾಡ-ಕಾಗಾಲದಲ್ಲಿ ವಿಜ್ಞಾನ ಶಿಕ್ಷಕರಾಗಿ ಸೇವೆ ಆರಂಭಿಸಿ, ಜನತಾ ವಿದ್ಯಾಲಯ ಬೇಡ್ಕಣಿಯಲ್ಲಿ ಮುಖ್ಯೋಪಾಧ್ಯಾಯರಾಗಿ, ಜನತಾವಿದ್ಯಾಲಯ ಸಂಯುಕ್ತ ಪದವಿ ಪೂರ್ವ ಕಾಲೇಜು, ದಾಂಡೇಲಿಯಲ್ಲಿ ಎರಡು ದಶಕಗಳಿಗೂ ಕಾಲ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ನಮ್ಮ ವಿದ್ಯಾಲಯದಲ್ಲಿ ಎರಡು ವರ್ಷಕ್ಕಿಂತಲೂ ಹೆಚ್ಚ ಕಾಲ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ಶ್ರೀ ಎಸ್. ಎ. ಭಟ್ಟರು ನಿವೃತ್ತರಾಗಿರುತ್ತಾರೆ.

ವಿದ್ಯಾಭ್ಯಾಸದ ಸಮಯದಿಂದಲೂ ಇವರು ಪ್ರತಿಭಾನ್ವಿತರು. ರಾಜಕೀಯ ಶಾಸ್ತ್ರ ಮತ್ತು ಶಿಕ್ಷಣ ವಿಷಯಗಳಲ್ಲಿ ಉಚ್ಚ ಶಿಕ್ಷಣ ಪಡೆದಿರುವ ಇವರು ಗಣಿತ ವಿಷಯ ಬೋಧನೆಯಲ್ಲಿ ಅಪಾರ ಅನುಭವ ಹೊಂದಿದವರು. ನಮ್ಮ ಶಾಲೆಯಲ್ಲಿಯೇ ರಾಷ್ಟ್ರೀಯ ಪ್ರತಿಭಾನ್ವೇಷಣೆ ಪರೀಕ್ಷೆಯ ಮಾರ್ಗದರ್ಶಕರಾಗಿ ತಮ್ಮ ಸೇವಾವಧಿಯಲ್ಲಿ ಹೆಚ್ಚುವರಿ ಸೇವೆ ಸಲ್ಲಿಸಿ ನಮ್ಮ ಶಾಲೆಯ ವಿದ್ಯಾರ್ಥಿ, ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಲ್ಲಿ ಕರ್ನಾಟಕಕ್ಕೆ ಪ್ರಥಮ ಸ್ಥಾನ ಪಡೆಯಲು ಕಾರ್ಯಕರ್ತರಾಗಿರುತ್ತಾರೆ. ಹಲವರು ಶ್ರೇಯಾಂಕ ಪಡೆದಿರುತ್ತಾರೆ.

ಶೈಕ್ಷಣಿಕ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿರುವ ಇವರು ವರ್ಷದುದ್ದಕ್ಕೂ ವಿವಿಧ ಚಟುವಟಿಕೆಗಳಲ್ಲಿ ಕಾರ್ಯಪ್ರವೃತ್ತರಾಗಿರುವ ಉತ್ಸಾಹಿಗಳು.

ನಮ್ಮ ಶಾಲೆಯ ವಿಜ್ಞಾನ ಭವನ ಮತ್ತು ಉಪನ್ಯಾಸ ಕೊಠಡಿಗಳ ನಿರ್ಮಾಣದಲ್ಲಿ ಶ್ರೀಯುತರ ಶ್ರಮ ಸ್ಮರಣೀಯ.

ಮಾನ್ಯ ಎಸ್. ಎ. ಭಟ್ಟರ ನಿವೃತ್ತ ಜೀವನ ಸುಖಮಯವಾಗಲಿ ಎಂದು ಆಶಿಸುತ್ತೇವೆ.

❋ *ಸಂಪಾದಕ ಮಂಡಳಿ.*



## ಶ್ರೀ ಪಿ. ಜಿ. ಭಟ್ಟ

ನಿವೃತ್ತ ವಿಜ್ಞಾನ ಶಿಕ್ಷಕರು.

ಸುಮಾರು ಮೂವತ್ತಾರು ವರ್ಷಗಳಷ್ಟು ಕಾಲ ಪ್ರೌಢಶಾಲೆಯ ವಿಜ್ಞಾನ ಮತ್ತು ಗಣಿತ ಶಿಕ್ಷಕರಾಗಿ, ನಿವೃತ್ತಿ ಹೊಂದಿರುವ, ಶ್ರೀಯುತ ಪಿ. ಜಿ. ಭಟ್ಟರು, ಉತ್ತಮ ಶಿಕ್ಷಕರು, ಸರಳ ಸ್ವಭಾವದ ಸ್ನೇಹ ಜೀವಿಗಳು. ವಿದ್ಯಾರ್ಥಿಗಳನ್ನು ತಮ್ಮ ಮಕ್ಕಳಂತೆ ನೋಡಿಕೊಳ್ಳುತ್ತಿದ್ದ ಅವರು ತಮ್ಮ ವಿದ್ಯಾರ್ಥಿಗಳ ಉತ್ಕರ್ಷೆಯಿಂದ ಸಂತೋಷ ಪಡುತ್ತಿದ್ದರು.

ಜನತಾ ವಿದ್ಯಾಲಯ ಕಡತೋಕಾದ, ಸಾಂಸ್ಕೃತಿಕ ಕಾರ್ಯಕ್ರಮಗಳ ನೇತೃತ್ವವನ್ನು ಸೇವಾ ಪ್ರಾರಂಭದಿಂದಲೇ ವಹಿಸಿಕೊಂಡು ಬಂದಿದ್ದ ಶ್ರೀಯುತರು, ಉತ್ತಮ ರಂಗ ನಿರ್ದೇಶಕರೂ ಆಗಿದ್ದರು. ಅಂತೆಯೇ ಈ ಭಾಗದ ಪ್ರಸಿದ್ಧ ಕಲಾವಿದರ ಪ್ರೀತ್ಯಾದರಗಳನ್ನೂ ಗಳಿಸಿದವರಾಗಿದ್ದರು. ಶ್ರೀಯುತರು ಶಾಲೆಯ ಸಾಂಸ್ಕೃತಿಕ ಚಟುವಟಿಕೆಗಳ ಕ್ಷೇತ್ರದಲ್ಲಿ ತಮ್ಮದೇ ಆದ ವೈಶಿಷ್ಟ್ಯತೆಯನ್ನು ಮೆರೆಸಿದವರಾಗಿದ್ದಾರೆ.

ಶ್ರೀಯುತರಿಗೆ, ಅವರ ನಿವೃತ್ತಿ ಜೀವನ ಸುಖಕರವಾಗಿರಲೆಂದೂ ಶ್ರೀ ದೇವರು ಅವರಿಗೆ ಉತ್ತಮ ಆಯುರಾರೋಗ್ಯ ದಯಪಾಲಿಸಲೆಂದು ನಮ್ಮೆಲ್ಲರ ಹಾರೈಕೆ.

❋ ಸಂಪಾದಕ ಮಂಡಳಿ.



## ಶ್ರೀ ಎಮ್. ಎನ್. ಭಟ್ಟ

ನಿವೃತ್ತ ಇಂಗ್ಲೀಷ ಶಿಕ್ಷಕರು.

ಸುಮಾರು ಮೂರುವರೆ ದಶಕಗಳಷ್ಟು ಕಾಲ ಇಂಗ್ಲೀಷ ಮತ್ತು ಭೂಗೋಳ ಶಿಕ್ಷಕರಾಗಿ ಸೇವೆ ಸಲ್ಲಿಸಿ, ಸ್ವಯಂ ನಿವೃತ್ತಿ ಹೊಂದಿರುವ, ಶ್ರೀ ಎಮ್. ಎನ್. ಭಟ್ಟರು ಆದರ್ಶ ಶಿಕ್ಷಕರಾಗಿದ್ದರು. ಜನತಾ ವಿದ್ಯಾಲಯ ಮುರ್ಡೇಶ್ವರದಲ್ಲಿ ವೃತ್ತಿ ಜೀವನ ಪ್ರಾರಂಭಿಸಿದ್ದ ಇವರು ಉತ್ತಮ ಇಂಗ್ಲೀಷ ಬೋಧಕರಾಗಿದ್ದು, ವೃತ್ತಿಯಲ್ಲಿ ಸಂತೃಪ್ತಿಯನ್ನು ಹೊಂದಿದವರಾಗಿದ್ದರು. ಕೊನೆಯ ಸಾಲಿನ ಕೊನೆಯ ವಿದ್ಯಾರ್ಥಿಗೂ ಅರ್ಥವಾಗುವಂತೆ ಇಂಗ್ಲೀಷ ಬೋಧಿಸುತ್ತಿದ್ದ ಅವರು ವಿದ್ಯಾರ್ಥಿಗಳಿಂದ ಗರಿಷ್ಠ ಕೆಲಸ ತೆಗೆದುಕೊಳ್ಳುವ ಶಿಕ್ಷಕರಾಗಿದ್ದರು.

ವಿದ್ಯಾಲಯದ ವಾಚನಾಲಯವನ್ನು ಎರಡುವರೆ ದಶಕಗಳಷ್ಟು ಕಾಲ ಆದರ್ಶವಾಗಿ ನಡೆಸಿದ ಅನುಭವ ಅವರದಾಗಿತ್ತು. ಶ್ರೀಯುತರ ನಿವೃತ್ತಿ ಜೀವನ ಸುಖಕರವಾಗಿರಲೆಂದು ಶ್ರೀ ದೇವರು ಅವರಿಗೆ ಆಯುಶ್ಯ ಮತ್ತು ಉತ್ತಮ ಆರೋಗ್ಯ ದಯಪಾಲಿಸಲೆಂದು ನಮ್ಮೆಲ್ಲರ ಹಾರೈಕೆ.

❋ ಸಂಪಾದಕ ಮಂಡಳಿ.



## ಶ್ರೀ ಎಮ್. ಕೆ. ಭಟ್ಟ

ನಿವೃತ್ತ ಹಿಂದಿ ಉಪನ್ಯಾಸಕರು.

ಜನತಾ ವಿದ್ಯಾಲಯ ಸಂಯುಕ್ತ ಪದವಿ ಪೂರ್ವ ಕಾಲೇಜು, ಕಡತೋಕದಲ್ಲಿ ಹಿಂದಿ ಉಪನ್ಯಾಸಕರಾಗಿ ನಿವೃತ್ತಿ ಹೊಂದಿರುವ ಶ್ರೀ ಎಂ.ಕೆ. ಊಟ್ಟರು ಇದೇ ವಿದ್ಯಾಲಯದಲ್ಲಿ ಕರಣಿಕರಾಗಿ, ಶಿಕ್ಷಕರಾಗಿ ಮತ್ತು ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ಅನುಭವ ಹೊಂದಿರುವ ವಿಶಿಷ್ಟರು. ಮತ್ತು ವಾಗ್ಮಿಗಳು, ಲೇಖಕರು, ಕವಿಗಳಾಗಿ ವಿದ್ಯಾರ್ಥಿಗಳನ್ನು ರಂಜಿಸಿದವರು. ಉತ್ತಮ ಹಿಂದಿ ಶಿಕ್ಷಕರಾಗಿದ್ದ ಇವರು ಇಂಗ್ಲೀಷ, ಕನ್ನಡ ಮತ್ತು ಸಂಸ್ಕೃತಗಳನ್ನು ಅಷ್ಟೇ ಸಮರ್ಥವಾಗಿ ಬೋಧಿಸಬಲ್ಲವರಾಗಿದ್ದರು.

ವಿದ್ಯಾರ್ಥಿಗಳನ್ನು ತಮ್ಮ ಸ್ನೇಹಪೂರ್ವ ನಡವಳಿಕೆಯಿಂದ ಆಕರ್ಷಿಸಿ, ಅವರಿಗೆ ಮಾರ್ಗದರ್ಶನ ನೀಡುತ್ತಿದ್ದ ಶ್ರೀಯುತರು ಎಲ್ಲರಿಗೂ ಬೇಕಾದ, ಸಂಕಷ್ಟಗಳಲ್ಲಿ ನೆರವಾಗುವ ಸ್ನೇಹಹಸ್ತರಾಗಿದ್ದರು.

ಶ್ರೀಯುತರ ನಿವೃತ್ತಿ ಜೀವನವು ಸುಖಕರವಾಗಿರಲೆಂದು ಶ್ರೀ ದೇವರು ಅವರಿಗೆ ಆಯುರಾರೋಗ್ಯ ದಯಪಾಲಿಸಲೆಂದು ಹಾರೈಸುತ್ತೇವೆ.

❋ ಸಂಪಾದಕ ಮಂಡಳಿ.

## 2000 - 2001 ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳು



# ಪ್ರತಿಭಾವಂತ ವಿದ್ಯಾರ್ಥಿಗಳು



ವಿಜಯಲಕ್ಷ್ಮೀ ಭಟ್ಟ
ಎಸ್.ಎಸ್.ಎಲ್.ಸಿ. ಪ್ರಥಮ 1998 - 99



ಕೆ.ಕೆ. ವಿನಯಮೂರ್ತಿ
ಎಸ್.ಎಸ್.ಎಲ್.ಸಿ. ಪ್ರಥಮ 1999 - 2000



ವೀಣಾಕುಮಾರಿ ಎಸ್.ಹೆಗಡೆ
ಎಸ್.ಎಸ್.ಎಲ್.ಸಿ. ಪ್ರಥಮ 2000 - 2001



ಎಸ್. ಮಹೇಶ
ಎಸ್.ಎಸ್.ಎಲ್.ಸಿ. ಪ್ರಥಮ 2000 - 2001



ಮುಕ್ತಾ ಎಂ. ಭಟ್ಟ
IIyr P.U.C, ಪ್ರಥಮ 1998 - 99



ಕೆ.ಕೆ. ಮೇಧಾ
IIyr P.U.C, ಪ್ರಥಮ 1999 - 2000



ಸುಜಾತಾ ಶ್ರೀಧರ ಹೆಗಡೆ
IIyr P.U.C, ಪ್ರಥಮ 2000 - 2001

## ವಿನಾಯಕ ಸ್ಕೌಟ್ ದಳ

ಜನತಾ ವಿದ್ಯಾಲಯ ಸಂಯುಕ್ತ ಪದವಿಪೂರ್ವ ಕಾಲೇಜು, ಕಡತೋಕಾ

2000-2001 ರಲ್ಲಿ ರಾಜ್ಯ ಪುರಸ್ಕಾರ ಪಡೆದಿರುತ್ತಾರೆ.


ಮಂಜುನಾಥ ಎಸ್. ನಾಯ್ಕ


ಗಣಪತಿ ಡಿ. ಗೌಡ


ಗಜಾನನ ಎಮ್. ನಾಯ್ಕ


ಜಗದೀಶ ಪಿ. ನಾಯ್ಕ

## ವಿನಾಯಕ ಸ್ಕೌಟ್ ದಳ

2000-2001 ರಲ್ಲಿ ರಾಷ್ಟ್ರಪತಿ ಪುರಸ್ಕಾರ ಪಡೆದಿರುತ್ತಾನೆ.


ಗಣಪತಿ ಗಣೇಶ ಭಟ್ಟ

## ವಿನಾಯಕ ಸ್ಕೌಟ್ ದಳ

2001-2002 ರಲ್ಲಿ ರಾಜ್ಯ ಪುರಸ್ಕಾರ ಪಡೆದವರು


ಕೆ. ಎಸ್. ಗಿರೀಶ


ಕೆ. ಸುಬ್ರಹ್ಮಣ್ಯ


ಹರೀಶ ದತ್ತಾತ್ರಯ ಭಟ್ಟ


ರತನ್ ಆರ್. ನಾಯ್ಕ

# ಜನತಾ ವಿದ್ಯಾಲಯ ಸಂ. ಪ. ಪೂ. ಕಾಲೇಜು, ಕಡತೋಕಾ

# ವಾರ್ಷಿಕ ವರದಿ 2001-02

ನಮ್ಮ ಈ ವಿದ್ಯಾಲಯವು 1959 ರಲ್ಲಿ ಶಾರದಾಂಬಾ ಹೈಸ್ಕೂಲಾಗಿದ್ದು ನಂತರ ಜನತಾ ವಿದ್ಯಾಲಯವಾಗಿ ಇಲ್ಲಿಯವರೆಗೆ ಸುತ್ತು - ಮುತ್ತಲಿನ ಚೌಕ ಗ್ರಾಮದ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತ ಬಂದಿದೆ.

**ಶಿಕ್ಷಕರು ವಿದ್ಯಾರ್ಥಿಗಳು-ಪಾಲಕರು-ನಮ್ಮ ಆಸ್ತಿ.**

ಈ ವರ್ಷ ನಮ್ಮ ವಿದ್ಯಾಲಯದಲ್ಲಿ ಎಂಟನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಒಟ್ಟು 272 ಹಾಗೂ ಪದವಿ-ಪೂರ್ವ ಕಾಲೇಜು ವಿಭಾಗದಲ್ಲಿ 197 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಈ ವಿದ್ಯಾರ್ಥಿಗಳಲ್ಲಿ ಶೇಕಡಾ 80 ರಷ್ಟು ವಿದ್ಯಾರ್ಥಿಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದಾರೆ. ಆದರೂ ಎಲ್ಲ ವಿದ್ಯಾರ್ಥಿಗಳು ಅತೀ ಸುಶೀಲರೂ, ವಿಧೇಯರೂ ಆಗಿದ್ದು ಶಿಸ್ತಿನಿಂದ ಪಾಠ ಕಲಿಯುತ್ತಿರುವುದು ನಮ್ಮ ವಿದ್ಯಾಲಯದ ವಿಶೇಷ. ಪ್ರತಿಭಾವಂತ ತರಬೇತಿ ಪಡೆದ ಅನುಭವಿ ಬೋಧಕರ ಮಾರ್ಗದರ್ಶನ, ಕರ್ತವ್ಯನಿಷ್ಠೆ ಹಾಗೂ ದಕ್ಷತೆಯೇ ಇದಕ್ಕೆ ಕಾರಣವೆಂದು ಭಾವಿಸುತ್ತೇನೆ. ಬೋಧಕ ಹಾಗೂ ಬೋಧಕೇತರ ಸದಸ್ಯರ ನಿಷ್ಠಾಪೂರ್ವಕ ಕಾರ್ಯಪ್ರವೃತ್ತಿಯಿಂದಾಗಿ, ಅವರ ತುಂಬು ಹೃದಯದ ಸಹಕಾರದಿಂದಾಗಿ ವಿದ್ಯಾಲಯವು ದಿನದಿಂದ ದಿನಕ್ಕೂ ಪ್ರಗತಿ ಹೊಂದುತ್ತಲಿದೆ. ಈ ವರ್ಷಾವಧಿಯಲ್ಲಿ ನಮ್ಮ ಸಿಬ್ಬಂದಿ ವರ್ಗದಲ್ಲಿ ಹೆಚ್ಚಿನ ಬದಲ ವಣೆಯಿಲ್ಲ. ಇನ್ನೂ ಅನುದಾನ ಸಹಿತವಾಗಿ ಸರ್ಕಾರದ ನೇಮಕವಾಗದಿರುವ ಖಾಲಿ ಹುದ್ದೆಗಳಲ್ಲಿ ಆದೇ ಹಂಗಾಮಿ ಶಿಕ್ಷಕರು ಮುಂದುವರಿದಿದ್ದಾರೆ. ಈ ವರ್ಷ ಆಗಷ್ಟ 15 ರಿಂದ ನಮ್ಮ ವಿದ್ಯಾರ್ಥಿಗಳಿಗಾಗಿ ಕಂಪ್ಯೂಟರ ಅರಿವು ಮೂಡಿಸಿ ಕಲಿಕೆ ಪೂರೈಸಲು ಪ್ರಯತ್ನಿಸುತ್ತಿದ್ದೇವೆ. ಸುವ್ಯವಸ್ಥಿತ ಕಂಪ್ಯೂಟರ ಕೋಣೆ ನಿರ್ಮಿಸಿ ಎರಡು ಕಂಪ್ಯೂಟರ್‌ಗಳನ್ನು ಹಾಗೂ ಒಂದು ಪ್ರಿಂಟರನ್ನು ಒದಗಿಸಿಕೊಳ್ಳಲಾಗಿದೆ ಕಂಪ್ಯೂಟರ ಪಾಠ ಮಾಡಲು ಕುಮಾರಿ ವಿದ್ಯಾ ನಾಯ್ಕರನ್ನು ಹಂಗಾಮಿಯಾಗಿ ನೇಮಿಸಿಕೊಂಡಿದ್ದೇವೆ. ಮಕ್ಕಳು ಉತ್ಸುಕತೆಯಿಂದ ಕಂಪ್ಯೂಟರ ಪಾಠ ಅರಿತುಕೊಳ್ಳುತ್ತಿದ್ದಾರೆ. ಈ ವರ್ಷ ನಮ್ಮ ವಿದ್ಯಾಲಯದ ಅನುಭವಿ ವಿಜ್ಞಾನ ಶಿಕ್ಷಕರಾದ ಶ್ರೀ ಜಿ. ಆರ್. ಭಟ್ ಧರ್ಮಶಾಲಾ ಇವರಿಗೆ ಜಿಲ್ಲೆಯ ಉತ್ತಮ ಶಿಕ್ಷಕರೆಂದು ಪ್ರಶಸ್ತಿ ದೊರೆತಿದೆ. ಇದು ನಮ್ಮ ವಿದ್ಯಾಲಯಕ್ಕೆ ಹೆಮ್ಮೆಯ ವಿಷಯ.

ಈ ವಿದ್ಯಾಲಯದ ಪರಿಪಾಠದಂತೆ ಶಿಕ್ಷಕ-ಬಾಲಕ-ಪಾಲಕ ಇವರ ಸಂದರ್ಶನಗಳು ಪೂರ್ವನಿರ್ಧರಿತ ಅವಧಿಯಲ್ಲಿ ನಡೆಯುತ್ತಿವೆ. ಇದರಿಂದ ಈ ಮೂವರ ಸೌಹಾರ್ದಯುತ ಸಹಕಾರ ಸಾಧ್ಯವಾಗಿದ್ದು, ಒಳ್ಳೆಯ ಪರಿಣಾಮ ತಂದು ಕೊಟ್ಟಿದೆ. ಈ ವರ್ಷ ಹತ್ತನೇ ತರಗತಿಯ ವಿದ್ಯಾರ್ಥಿಗಳಲ್ಲಿ ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳನ್ನು ಪ್ರತಿ ಶಿಕ್ಷಕರು ಮೂರು ವಿದ್ಯಾರ್ಥಿಗಳಂತೆ ದತ್ತು ತೆಗೆದುಕೊಂಡು ಅವರ ಕಲಿಕೆಯಲ್ಲಿ ಹೆಚ್ಚಿನ ಸಾಧನೆಗೈಯ್ಯಲು ಶ್ರಮಿಸುತ್ತಿದ್ದಾರೆ. ಇಲಾಖೆಯ ನಿಯಮದಂತೆ ಹಿರಿಯ ಶಿಕ್ಷಕರಾದ ಶ್ರೀ ಸುಬ್ರಾಯ ಭಟ್ಟ ಹಾಗೂ ಶ್ರೀ ಜಿ. ಆರ್. ಭಟ್ಟ ಅವರ ನೇತೃತ್ವದಲ್ಲಿ ಪರೀಕ್ಷೆ, ಮೌಲ್ಯಮಾಪನ ಹಾಗೂ ಪ್ರಗತಿ ಪತ್ರಗಳ ವಿತರಣೆಯ ಕಾರ್ಯ ಸುಗಮವಾಗಿ ನಡೆಯುತ್ತಿದೆ.

## ಪರೀಕ್ಷೆಯ ಪರಿಣಾಮ

ನಮ್ಮ ವಿದ್ಯಾಲಯದ ವಿದ್ಯಾರ್ಥಿಗಳು ಎಸ್. ಎಸ್. ಎಲ್. ಸಿ. ಹಾಗೂ ದ್ವಿ. ಪಿ. ಯು. ಸಿ. ಸಾರ್ವತ್ರಿಕ ಪರೀಕ್ಷೆಯಲ್ಲಿ ಉನ್ನತ ಸಾಧನೆಗೈದಿದ್ದಾರೆ. ಎಸ್. ಎಸ್. ಎಲ್. ಸಿ. ಯಲ್ಲಿ 63 ವಿದ್ಯಾರ್ಥಿಗಳು ಹಾಗೂ ಪ. ಪೂ. ವಿಭಾಗದಲ್ಲಿ 92 ವಿದ್ಯಾರ್ಥಿಗಳು 2001 ವಾರ್ಷಿಕ ಪರೀಕ್ಷೆಗೆ ಹಾಜರಾಗಿದ್ದು ಅವರಲ್ಲಿ 41 ವಿದ್ಯಾರ್ಥಿಗಳು ಎಸ್. ಎಸ್.ಎಲ್.ಸಿ.ಯಲ್ಲಿ 72 ವಿದ್ಯಾರ್ಥಿಗಳು ಪಿ. ಯು. ಸಿ.ಯಲ್ಲಿ ಉತ್ತೀರ್ಣರಾಗಿದ್ದಾರೆ. ಇದರಿಂದ ನಮ್ಮ ಫಲಿತಾಂಶ ಶೇ. 65 ಎಸ್. ಎಸ್. ಎಲ್. ಸಿ.ಯಲ್ಲಿ ಹಾಗೂ ಪಿ. ಯು. ಸಿ. ಯಲ್ಲಿ ಶೇ. 78.26 ಆಗಿದೆ. ಈ ವರ್ಷ ಕುಮಾರಿ ವೀಣಾ ಎಸ್. ಹೆಗಡೆ ಶೇ. 91.26 ಹಾಗೂ ಎಸ್. ಮಹೇಶ ಶೇ. 91.26 ಅಂಕ ಗಳಿಸಿ ಎಸ್. ಎಸ್. ಎಲ್. ಸಿ. ಯಲ್ಲಿ ಪ್ರಥಮರೆನಿಸಿಕೊಂಡಿದ್ದಾರೆ. ದ್ವಿ. ಪಿ. ಯು. ಸಿಯಲ್ಲಿ ಕು. ಸುಜಾತಾ ಶ್ರೀಧರ ಹೆಗಡೆ ಶೇ. 84.6 ಅಂಕ ಪಡೆದು ಪ್ರಥಮಳೆನಿಸಿಕೊಂಡು ಈ ವಿದ್ಯಾಲಯಕ್ಕೆ ಹೆಮ್ಮೆ ತಂದಿದ್ದಾಳೆ.

## ಕ್ರೀಡಾ ಚಟುವಟಿಕೆ

ವಿದ್ಯಾಲಯದ ಎಲ್ಲ ವಿದ್ಯಾರ್ಥಿಗಳು ನಿರಂತರವಾಗಿ ಆಟದ ಬಯಲಿನಲ್ಲಿ ಶ್ರೀ ಎನ್. ವಿ. ಬೀರ್ಕೋಡಿ ಅವರ ಮಾರ್ಗದರ್ಶನದಲ್ಲಿ ವಿವಿಧ ಆಟೋಟಗಳ ತರಬೇತಿ ಪಡೆಯುತ್ತಾರೆ. ನಮ್ಮ ವಿದ್ಯಾರ್ಥಿಗಳು ವಲಯ ಮಟ್ಟ ಹಾಗೂ ತಾಲೂಕಾ ಮಟ್ಟದಲ್ಲಿ ಇಲಾಖಾ ಕ್ರೀಡಾ ಕೂಟದಲ್ಲಿ ಭಾಗವಹಿಸಿದ್ದಾರೆ. ಸ್ಪರ್ಧಾತ್ಮಕವಾಗಿ ಈ ಚಟುವಟಿಕೆಗಳು ಗುಂಪುಗಳ ವಿಧಾನದಲ್ಲಿ ನಡೆಸಲ್ಪಟ್ಟು ವಿಜೇತರಾದವರಿಗೆ ಪ್ರಶಸ್ತಿಗಳನ್ನು ಈ ದಿನ ವಿತರಿಸುತ್ತಿದ್ದೇವೆ. ಈ ವರ್ಷ ಪ್ರೌಢಶಾಲಾ ವಿಭಾಗದ ತಾಲೂಕಾ ಮಟ್ಟದ ಇಲಾಖಾ ಕ್ರೀಡಾಕೂಟವನ್ನು ನಿರ್ವಹಿಸುವ ಹೊಣೆಗಾರಿಕೆ ನಮ್ಮದಾಗಿತ್ತು. ಅದನ್ನು ಸ್ಥಳೀಯ ಹಾಗೂ ಪರಸ್ಥಳೀಯ ದಾನಿಗಳ ಸಹಕಾರದಿಂದ ಯಶಸ್ವಿಯಾಗಿ

ನಿರ್ವಹಿಸಿದ್ದೇವೆ. ರಾಷ್ಟ್ರೀಯ ದಿನಗಳಾದ ಅಗಸ್ಟ 15 ಹಾಗೂ ಜನವರಿ 26 ದಿನಗಳನ್ನು ಸಮಯೋಚಿತವಾಗಿ ಆಚರಿಸಿದ್ದೇವೆ ಎಂದಿನಂತೆ ಜನವರಿ 23 ರಂದು ನೇತಾಜಿ ಸುಭಾಷಚಂದ್ರಭೋಸರ ಜನ್ಮ ದಿನವನ್ನು ದೈಹಿಕ ಶಿಕ್ಷಣ ದಿನವೆಂದು ಆಚರಿಸುವುದು ನಮ್ಮ ವಿದ್ಯಾಲಯದ ವೈಶಿಷ್ಟ್ಯ. ಅಂತೆಯೇ ಕಾಲೇಜು ವಿಭಾಗದಲ್ಲಿ ನಿರಂತರ ಆಟೋಟ ವ್ಯವಸ್ಥೆಯಿದ್ದು ನಮ್ಮ ವಿದ್ಯಾರ್ಥಿಗಳು ತಾಲೂಕಾ ಹಾಗೂ ಜಿಲ್ಲಾಮಟ್ಟದಲ್ಲಿ ವಾಲಿಬಾಲ್ ಪಂದ್ಯಾವಳಿಯಲ್ಲಿ ಪ್ರಶಸ್ತಿ ಪಡೆದಿದ್ದಾರೆ. ಮಕ್ಕಳಿಗೆ ಕ್ರೀಡಾ ಜಗತ್ತನ್ನು ಪರಿಚಯಿಸಲು ಪ್ರೌಢಶಾಲಾ ವಿಭಾಗದಲ್ಲಿ ಕ್ರೀಡಾ ರಸಪ್ರಶ್ನೆ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಎಲ್ಲ ವಿದ್ಯಾರ್ಥಿಗಳು ಈ ಕಾರ್ಯಕ್ರಮದಲ್ಲಿ ಕುತೂಹಲಕಾರಿಯಾಗಿ ಭಾಗವಹಿಸಿದ್ದರು. ಪದವಿ ಪೂರ್ವ ವಿಭಾಗದಲ್ಲಿ ಜಿಲ್ಲಾ ಮಟ್ಟದಲ್ಲಿ ನಡೆದ ಪ. ಪೂ. ಶಿಕ್ಷಣದ ಇಲಾಖಾ ಕ್ರೀಡಾಕೂಟದಲ್ಲಿ ಕು. ದೀಪಾ ನಾಯ್ಕ ಎತ್ತರ ಜಿಗಿತದಲ್ಲಿ ಪ್ರಥಮ ಸ್ಥಾನ ಪಡೆದು ರಾಜ್ಯ ಮಟ್ಟದಲ್ಲಿ ಭಾಗವಹಿಸಿ ಹೆಮ್ಮೆ ತಂದಿದ್ದಾಳೆ. ಪ್ರಶಾಂತ ಎಂ. ನಾಯ್ಕ ಇದೇ ಕ್ರೀಡಾಕೂಟದಲ್ಲಿ ಗುಂಡು ಎಸೆತದಲ್ಲಿ ದ್ವಿತೀಯ ಸ್ಥಾನ ಪಡೆದಿದ್ದಾನೆ.

## ಕಲಾ ಚಟುವಟಿಕೆ

ನಮ್ಮ ವಿದ್ಯಾಲಯದಲ್ಲಿ ನಿರ್ಮಿಸಿಕೊಂಡ ಕಾಲವೃತ್ತದಡಿಯಲ್ಲಿ ಪೂರ್ವ ನಿರ್ಧರಿತ ವೇಳಾಪಟ್ಟಿಯಂತೆ ವಿವಿಧ ಕಲಾ ಚಟುವಟಿಕೆಗಳು, ಸ್ಪರ್ಧೆಗಳು ನಡೆಯುತ್ತವೆ. ಪ್ರತಿ ವರ್ಷದಂತೆ ಮಕ್ಕಳ ಕಲಾ ಪ್ರತಿಭೆಗೆ ಅವಕಾಶ ನೀಡಲು ಜನವರಿ 26 ರಂದು ಮನರಂಜನಾ ಪ್ರದರ್ಶನ ನಡೆಯಿತು. ವನಮಹೋತ್ಸವ, ಶಾರದಾ ಪೂಜೆ, ಸಂಸ್ಥಾಪಕರ ದಿನಾಚರಣೆ, ವಿಶೇಷ ಉಪನ್ಯಾಸಗಳ ಏರ್ಪಾಟು, ರಾಷ್ಟ್ರೀಯ ಉತ್ಸವಗಳ ಆಚರಣೆ ಮುಂತಾದ ಕಾರ್ಯಕ್ರಮಗಳನ್ನು ಯಥೋಚಿತವಾಗಿ ನೆರವೇರಿಸಲಾಯಿತು. ಇದಕ್ಕೆ ಶಿಕ್ಷಕರಾದ ಶ್ರೀ ಸಿ. ಎಸ್. ಪ್ರಕಾಶ ಹಾಗೂ ಶ್ರೀಮತಿ ಗಿರಿಜಾ ನಾಯ್ಕ ಅವರ ಮಾರ್ಗದರ್ಶನ ಗಮನಾರ್ಹವಾದದ್ದು. ಈ ವರ್ಷ " ಸ್ಪಿಕ್ ಮೆಕೆ " ಎಂಬ ರಾಷ್ಟ್ರಮಟ್ಟದ ಭಾರತೀಯ ಕಲೆ, ಸಂಸ್ಕೃತಿ, ಶಾಸ್ತ್ರೀಯ ಸಂಗೀತ, ಸಂಸ್ಥೆಯ ಆಡಿಯಲ್ಲಿ ಸಂಗೀತ ಕಾರ್ಯಕ್ರಮವನ್ನು ಯಶಸ್ವಿಯಾಗಿ ಏರ್ಪಡಿಸಲಾಯಿತು.

## ಸಾಂಸ್ಕೃತಿಕ ಚಟುವಟಿಕೆ ಹಾಗೂ ಸಂಸತ್ತು

ನಮ್ಮ ವಿದ್ಯಾಲಯದ ವಿದ್ಯಾರ್ಥಿ ಸಂಸತ್ತು ಎಂದಿನಂತೆಯೇ ಹ್ಯಾಸ್ಕೂಲು ಹಾಗೂ ಕಾಲೇಜು ವಿಭಾಗದಲ್ಲಿ ವರ್ಷಾರಂಭದಲ್ಲಿ ರೂಪುಗೊಳ್ಳುತ್ತದೆ. ಈ ವರ್ಷ ಕಾಲೇಜು ವಿಭಾಗಕ್ಕೆ ಕು. ಪ್ರದೀಪ ಎಸ್. ನಾಯ್ಕ ಹಾಗೂ ಹ್ಯಾಸ್ಕೂಲ ವಿಭಾಗಕ್ಕೆ ಕು. ಕೆ. ಎಸ್. ಗಿರೀಶ ಇವರು ಮುಖ್ಯ ಪ್ರತಿನಿಧಿಗಳಾಗಿದ್ದಾರೆ. ಈ ಪ್ರತಿನಿಧಿಗಳು

ಸಂಘಟಿಸಲು ನೆರವಾಗುತ್ತಾರೆ. ಇಲಾಖೆಗಳ ಎಲ್ಲ ಸಾಂಸ್ಕೃತಿಕ ಚಟುವಟಿಕೆಗಳನ್ನು ಆದೇಶದಂತೆ ವಿದ್ಯಾರ್ಥಿಗಳು ಅನೇಕ ಭಾಷಣ, ಚರ್ಚೆ, ಗಾಯನ, ಸಾಮಾನ್ಯಜ್ಞಾನ ನೃತ್ಯ ಮುಂತಾದ ಸ್ಪರ್ಧೆಗಳಲ್ಲಿ ಸಕ್ರೀಯವಾಗಿ ಪಾಲ್ಗೊಂಡು ಗಣನೀಯ ಸಾಧನೆ ಮಾಡಿದ್ದಾರೆ. ಇದಕ್ಕೆ ಶಿಕ್ಷಕರಾದ ಶ್ರೀ ಜಿ. ವಿ ಭಟ್ ಮತ್ತು ಶ್ರೀಮತಿ ಉಷಾ ಭಟ್ ಇವರು ಮಾರ್ಗದರ್ಶಕರಾಗಿದ್ದಾರೆ. ನಮ್ಮ ಹೆಮ್ಮೆಯ ವಿದ್ಯಾರ್ಥಿಗಳಾದ ಕುಮಾರಿ ರಾಜೇಶ್ವರಿ ಭಟ್, ಕು. ಕೆ. ಎಸ್. ಗಿರೀಶ ಇವರು ಸಂಸ್ಕೃತ ಭಾಷಣ ಹಾಗೂ ಗೀತ ಗಾಯನದಲ್ಲಿ ಪ್ರಶಸ್ತಿ ಪಡೆದಿದ್ದಾರೆ ಕು. ಪಾವನಾ ಡಿ. ಭಟ್ ಇವಳು ರೋಟರಿ ಕ್ಲಬ್ ಮಹಿಳಾ ಸಶಕ್ತೀಕರಣ ಭಾಷಣ ಸ್ಪರ್ಧೆಯಲ್ಲಿ ಪ್ರಶಸ್ತಿ ಪಡೆದಿದ್ದಾಳೆ. ಕಾಲೇಜು ವಿಭಾಗದಲ್ಲಿ ದ್ವಿತೀಯ ಪಿ ಯು ಸಿಯ ಕು. ಸವಿತಾ ಪಟಗಾರ ಇವಳು ಜಿಲ್ಲಾ ಮಟ್ಟದ ಕನ್ನಡ ಪ್ರಬಂಧ ಸ್ಪರ್ಧೆಯಲ್ಲಿ ನಮ್ಮ ವಿದ್ಯಾಲಯಕ್ಕೆ ಹೆಮ್ಮೆ ತಂದಿದ್ದಾಳೆ.

ವಿದ್ಯಾಲಯದಲ್ಲಿ ಎಲ್ಲ ವಿದ್ಯಾರ್ಥಿಗಳಿಗೂ ಓದಿಗಾಗಿ ಪುಸ್ತಕಗಳನ್ನು ಸರದಿಯಂತೆ ಒದಗಿಸಲಾಗಿದೆ. ಇನ್‌ಪೋಸಿಸ್ ಸಂಸ್ಥೆ ನೀಡಿದ ಪುಸ್ತಕಗಳನ್ನು ಪ್ರತಿಯೊಬ್ಬ ವಿದ್ಯಾರ್ಥಿಗೂ ಓದಲು ನೀಡುತ್ತಿದ್ದೇವೆ. ವರ್ಗ ಶಿಕ್ಷಕರ ಮೂಲಕ ಗ್ರಂತಾಲಯ ದಲ್ಲಿಯ ಪುಸ್ತಕಗಳನ್ನು ಆಸಕ್ತಿಗನುಗುಣವಾಗಿ ಮಕ್ಕಳಿಗೆ ಒದಗಿಸಲಾಗುತ್ತಿದೆ. ಕಾಲೇಜು ವಿಭಾಗದ ವಿದ್ಯಾರ್ಥಿಗಳಿಗೆ ಸರದಿಯಂತೆ ಪಠ್ಯಪುಸ್ತಕ ಹಾಗೂ ಆಕರ ಗ್ರಂಥ ಗಳನ್ನು ವ್ಯವಸ್ಥಿತವಾಗಿ ಒದಗಿಸುತ್ತಿದ್ದೇವೆ. ಶ್ರೀ ಡಿ ಎನ್. ವೈದ್ಯ ಹಾಗೂ ಶ್ರೀ ಜಿ. ಎಸ್. ಹೆಗಡೆಯವರು ಪುಸ್ತಕಗಳನ್ನು ವ್ಯವಸ್ಥಿತವಾಗಿ ಒದಗಿಸುತ್ತಲಿದ್ದಾರೆ.

## ವೈಜ್ಞಾನಿಕ ಚಿಂತನೆ

ನಮ್ಮ ಶಾಲೆಯ ವಿಜ್ಞಾನ ಸಂಘವು ಶ್ರೀ ಜಿ. ಆರ್. ಭಟ್ ಇವರ ಮಾರ್ಗ-ದರ್ಶನದಲ್ಲಿ ಮಕ್ಕಳು ಇಲಾಖೆಯ ಜಿಲ್ಲಾ ಮಟ್ಟದ ಪ್ರದರ್ಶನದಲ್ಲಿ ಹಾಗೂ ಕೆನರಾ ವೆಲ್‌ಫೇರ್ ಟ್ರಸ್ಟಿನ ವಿಜ್ಞಾನ ಪ್ರದರ್ಶನಗಳಲ್ಲಿ ಭಾಗವಹಿಸಿ ಪ್ರಶಸ್ತಿಗೆ ಅರ್ಹತೆ ಪಡೆದಿದ್ದಾರೆ. ವೈಜ್ಞಾನಿಕ ಪ್ರಾತ್ಯಕ್ಷಿಕೆಗಳನ್ನು ತಯಾರಿಸುವುದು ವಿಜ್ಞಾನ ವಿಷಯದಲ್ಲಿ ಭಾಷಣ ಹಾಗೂ ಚರ್ಚೆಗಳಲ್ಲಿ ಭಾಗವಹಿಸುವುದು ವಿದ್ಯಾರ್ಥಿಗಳಿಗೆ ಹೊಸ ಅವಕಾಶ ಒದಗಿಸಿ ಕೊಟ್ಟಿದೆ. ಈ ವಿಜ್ಞಾನ ವಿಷಯದಲ್ಲಿ ಸಾಮಾನ್ಯಜ್ಞಾನ (ಕ್ವಿಜ್) ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಪ್ರೌಢ ಶಾಲಾ ವಿಭಾಗದ ಮಕ್ಕಳು ಸಕ್ರೀಯವಾಗಿ ಪಾಲ್ಗೊಂಡು ತಮ್ಮ ಬುದ್ಧಿಯನ್ನು ಚುರುಕಿಸಿಕೊಳ್ಳಲು ಸಾಧ್ಯ-ವಾಯಿತು. ಧಾರವಾಡದ ವಿದ್ವಾನ್ ಶ್ರೀ ಗಣಪತಿ ಭಟ್ಟರು ವೇದಗಣಿತ ಪ್ರಾತ್ಯ-ಕ್ಷಿಕೆಯ ಕಾರ್ಯಕ್ರಮವನ್ನು ಮನದಟ್ಟಾಗುವಂತೆ ಪೂರೈಸಿಕೊಟ್ಟರು.

## ಹಸ್ತ ಪತ್ರಿಕೆಗಳು

ಪ್ರತಿವರ್ಷದಂತೆ ಈ ವರ್ಷವೂ ಮಕ್ಕಳಿಂದ ತಯಾರಿಸಲ್ಪಟ್ಟ "ವಿಜ್ಞಾನ ರಶ್ಮಿ" ಯೆಂಬ ಹಸ್ತ ಪತ್ರಿಕೆ ಹೊರಬೀಳಲಿದೆ. ಇದರಲ್ಲಿ ವಿದ್ಯಾರ್ಥಿಗಳು ಪಡೆದ ವೈಜ್ಞಾನಿಕ ಮಾಹಿತಿಗಳ ಸಂಗ್ರಹ, ವಿಜ್ಞಾನ ಪ್ರಚೋದಿತ ಲೇಖನಗಳನ್ನು ಕಾಣಬಹುದು.

## ಸ್ಕೌಟುಗಳು

ಮಕ್ಕಳಲ್ಲಿ ಸೇವಾ ಗುಣ, ಸಂಯಮಶೀಲತೆ ಹಾಗೂ ಸುಶೀಲಗಳನ್ನು ಬೆಳೆಸು-ವುದಕ್ಕಾಗಿಯೇ ಸ್ಕೌಟ ಗುಂಪು ಶ್ರೀ ಜಿ. ಆರ್. ಮಡಿವಾಳರವರ ನೇತೃತ್ವದಲ್ಲಿ ಅತೀ ಚುರುಕಾಗಿ ಕಾರ್ಯನಿರತವಾಗಿದೆ. ಶಾಲಾ ಆವಾರದ ಸ್ವಚ್ಛತೆ, ಹುತೋಟದ ಅಭಿವೃದ್ಧಿ ಹಾಗೂ ಸಸ್ಯಪಾಲನೆ ಕಾರ್ಯಗಳಲ್ಲಿ ಸ್ಕೌಟುಗಳು ವಿನಮ್ರವಾಗಿ ಪಾಲ್ಗೊಳ್ಳುತ್ತಾರೆ.ಸ್ಕೌಟ ಗುಂಪಿನಲ್ಲಿ ಈಗ 24 ವಿದ್ಯಾರ್ಥಿಗಳು ತರಬೇತಿ ಪಡೆಯು-ತ್ತಿದ್ದಾರೆ. ಇವರಲ್ಲಿ 5 ವಿದ್ಯಾರ್ಥಿಗಳು ರಾಜ್ಯ ಪುರಸ್ಕಾರ ಪರೀಕ್ಷೆಗೆ ಹಾಜರಾಗಿ ಪ್ರಶಸ್ತಿಗೆ ಆಯ್ಕೆಯಾಗಿದ್ದಾರೆ. ಎಲ್ಲ ಸ್ಕೌಟುಗಳು ಹೊರ ಊರಿನಲ್ಲಿ ನಡೆದ 3 ದಿನಗಳ ಕ್ಯಾಂಪನಲ್ಲಿ ಭಾಗವಹಿಸಿ ಅಪಾರ ಕಾರ್ಯಾನುಭವ ಪಡೆದಿದ್ದಾರೆ.

## ಶೈಕ್ಷಣಿಕ ಪ್ರವಾಸ

ಮಕ್ಕಳಿಗೆ ಪ್ರವಾಸಗಳ ಮೂಲಕ ಸ್ವಾನುಭವ ದೊರಕಿಸಿಕೊಡಲು ಶೈಕ್ಷಣಿಕ ಪ್ರವಾಸಗಳನ್ನು ಏರ್ಪಡಿಸಲಾಗುವುದು. ಈ ವರ್ಷ ಹೈಸ್ಕೂಲು ವಿದ್ಯಾರ್ಥಿಗಳು ಧರ್ಮಸ್ಥಳ, ಕೊಲ್ಲೂರು, ಹೊರನಾಡು, ಬೇಲೂರು-ಹಳೆಬೀಡುಗಳಿಗೆ ಪ್ರವಾಸ-ಗೈದರೆ, ಪ. ಪೂ. ವಿಭಾಗದ ವಿದ್ಯಾರ್ಥಿಗಳು ಇಕ್ಕೇರಿ, ಕೆಳದಿ, ವರದಳ್ಳಿ, ಜೋಗ-ಗಳಿಗೆ ಶೈಕ್ಷಣಿಕ ಪ್ರವಾಸ ಕೈಗೊಂಡಿದ್ದಾರೆ. ಈ ಪ್ರವಾಸಗಳಲ್ಲಿ ಅನುಭವೀ ಶಿಕ್ಷಕರ ಮಾರ್ಗದರ್ಶನ ಹೆಚ್ಚಿನ ಪ್ರಯೋಜನಕಾರಿಯಾಗಿತ್ತು.

## ವಿಶೇಷ ಉಪನ್ಯಾಸಗಳು

ಪ. ಪೂ. ವಿದ್ಯಾರ್ಥಿಗಳಿಗೆ ಇಲಾಖಾ ಆದೇಶದಂತೆ ರಾಷ್ಟ್ರೀಯ ಏಕತಾ ಸಪ್ತಾಹದ ಅಡಿಯಲ್ಲಿ ವಿಶೇಷ ತಜ್ಞರನ್ನು, ಅನುಭವಿಗಳನ್ನು ಕರೆಸಿ ವಿಶೇಷ ಉಪನ್ಯಾಸ ಏರ್ಪಡಿಸಲಾಗಿತ್ತು. ಉಪನ್ಯಾಸಕರಾದ ಪ್ರೊ. ವಿ. ಆರ್. ಜೋಶಿ ಕುಮಟಾ, ಡಾ। ಜಿ. ಎಲ್. ಹೆಗಡೆ ಕುಮಟಾ, ಶಿಕ್ಷಕರಾದ ಶ್ರೀ ಜಿ. ಟಿ. ಹೆಬ್ಬಾರ, ಶ್ರೀಮತಿ ವಿನಯಾ ಶಾನಭಾಗ, ನಿವೃತ್ತ ಮುಖ್ಯಾಧ್ಯಾಪಕಿಯರು ಸೂಚಿತ ವಿಷಯಗಳ ಮೇಲೆ ಪಾಂಡಿತ್ಯಪೂರ್ವಕ ಪ್ರವಚನ ನೀಡಿದರು.

“ ದಿನಕರ ದೇಸಾಯಿಯವರು ಹಾಗೂ ಕನ್ನಡ ಸಾಹಿತ್ಯ ” ಎಂಬ ವಿಷಯದ ಮೇಲೆ ಡಾ|| ಶ್ರೀಪಾದ ಶೆಟ್ಟಿ, ಉಪನ್ಯಾಸಕರು, ಹೊನ್ನಾವರ ಇವರು ಪರಿಪಕ್ವವಾದ ಉಪನ್ಯಾಸ ನೀಡಿದರು.

ಶ್ರೀ ಎಸ್. ಜಿ. ಭಟ್ಟ ಪ್ರಾಚಾರ್ಯರು,ಪ ಪೂ ಕಾಲೇಜು, ಕವಲಕ್ಕಿ ಅವರು ವನಮಹೋತ್ಸವ ಕಾರ್ಯಕ್ರಮದಲ್ಲಿ ವಿಶೇಷ ಉಪನ್ಯಾಸಕರಾಗಿದ್ದರು. ಜನವರಿ 12 ರಂದು ಬಾಹ್ಯಾಕಾಶ ವಿಜ್ಞಾನಿಗಳಲ್ಲಿ ಒಬ್ಬರಾದ ಶ್ರೀ ಪಿ.ಜೆ. ಭಟ್ ಅವರು ಬಾಹ್ಯಾಕಾಶ ವಿಜ್ಞಾನಕ್ಕೆ ಐ. ಎಸ್. ಆರ್. ಓ. ದ ಕೊಡುಗೆಯ ಕುರಿತು ಪ್ರೌಢ ಶಾಲಾ ಮಕ್ಕಳಿಗೆ ಮನತಟ್ಟುವಂತೆ ಉಪನ್ಯಾಸ ನೀಡಿದರು. ಉಪನ್ಯಾಸ ನೀಡುವಾಗ ಅವರು ಬಳಸಿದ ಚಿತ್ರಗಳು ಹಾಗೂ ಉದಾಹರಣೆಗಳು ನಮ್ಮ ಮಕ್ಕಳನ್ನು ಹುರಿದುಂಬಿಸಲು ಸಹಾಯಮಾಡಿದವು.

## ಕಟ್ಟಡ ನಿರ್ಮಾಣ

ನಮ್ಮ ಸಂಸ್ಥೆಯ ಪ. ಪೂ. ವಿಭಾಗಕ್ಕೆ ಅವಶ್ಯಕವಾದ ಕೋಣೆಗಳನ್ನು ನಿರ್ಮಿಸಲು ಪ್ರಯತ್ನಶೀಲರಾಗಿದ್ದೇವೆ. ಕಳೆದ ವರ್ಷ 3 ಲಕ್ಷ ರೂಪಾಯಿ ವೆಚ್ಚದಲ್ಲಿ ಒಂದು ಕೋಣೆ ನಿರ್ಮಿಸಿ ಬಳಸುತ್ತಿದ್ದೇವೆ. ಇನ್ನೊಂದು ವರ್ಗ ಕೋಣೆ ಹಾಗೂ ಗ್ರಂಥಾಲಯದ ಕೋಣೆಗಳ ನಿರ್ಮಾಣ ಕಾರ್ಯ ತ್ವರಿತ ಗತಿಯಲ್ಲಿ ಸಾಗಿದೆ. ಇನ್ನೆರಡು ತಿಂಗಳಲ್ಲಿ ಅವುಗಳನ್ನು ಪೂರ್ತಿಗೊಳಿಸುವ ಆಶೆ ನಮ್ಮದು. ಇವುಗಳ ನಿರ್ಮಾಣಕ್ಕೆ ತಗಲಬಹುದಾದ ರೂ. 6 ಲಕ್ಷ ವೆಚ್ಚದಲ್ಲಿ ರೂ. 2 ಲಕ್ಷಗಳನ್ನು ನಮ್ಮ ಮಾತೃಸಂಸ್ಥೆಯಾದ ಕೆನರಾ ವೆಲ್‌ಫೇರ್ ಟ್ರಸ್ಟ ಒದಗಿಸಿ ಕೊಡುತ್ತಿದೆ. ಇನ್ನುಳಿದ ಹಣವನ್ನು ಕೂಡಿಸುವುದು ನಮ್ಮ ಹೊಣೆಯಾಗಿದೆ. ಈ ಹಿಂದೆ ಪಿ. ಯು. ಸಿ. ಒಂದು ವರ್ಗ ಕೋಣೆ ನಿರ್ಮಾಣಕ್ಕಾಗಿ ರೂ. 1 ಲಕ್ಷವನ್ನು ತಮ್ಮ ತಾಯಿಯ ಹೆಸರಿನಲ್ಲಿ ದೇಣಿಗೆಯಾಗಿ ನೀಡಿದ ಶ್ರೀ ವಿ. ಎಸ್. ಹೆಗ್ಡೆ, ಗಾಳಿ, ವಾಪಿ ಇವರನ್ನು ಮಹಾದಾನಿಗಳೆಂದು ಸ್ಮರಿಸುತ್ತೇವೆ.

## ನಮ್ಮ ಮುಂದಿನ ಸಮಸ್ಯೆಗಳು

ಇತ್ತೀಚಿನ ವಿದ್ಯಮಾನದ ಪ್ರಕಾರ ಈಗ ಖಾಲಿ ಇರುವ ಹಾಗೂ ಖಾಲಿಯಾಗಲಿರುವ ಶಿಕ್ಷಕ ಹುದ್ದೆಗಳನ್ನು ತುಂಬದಿರಲು ಸರಕಾರ ನಿರ್ಧರಿಸಿದೆ. ಖಾಲಿ ಹುದ್ದೆಗಳಿಗೆ ಹಂಗಾಮಿ ಶಿಕ್ಷಕರನ್ನು ಒದಗಿಸಿಕೊಂಡು ಅವರಿಗೆ ಗೌರವ ಧನ ನೀಡುತ್ತ ಬರುವುದು

ನಮ್ಮ ಹೊಣೆಯಾಗಿದೆ.ಅಷ್ಟೇ ಅಲ್ಲದೇ ಕಟ್ಟಡ,ಪೀಠೋಪಕರಣ ಹಾಗೂ ನಿರ್ವಹಣಾ ವೆಚ್ಚಗಳಿಗೆ ನಾವೇ ಹಣ ಒದಗಿಸಿಕೊಳ್ಳಬೇಕಾಗಿದೆ. ಅದಕ್ಕಾಗಿ ಇಲ್ಲಿಯ ಪಾಲಕರು, ಪೋಷಕರು, ದಾನಿಗಳು ಸಹೃದಯತೆಯಿಂದ ಈ ವಿದ್ಯಾಸಂಸ್ಥೆಯ ಬೆಳವಣಿಗೆಯಲ್ಲಿ ಎಂದಿನಂತೆ ತುಂಬಾ ಸಹಕಾರ ನೀಡಬೇಕೆಂದು ವಿನಂತಿಸಿಕೊಳ್ಳುತ್ತೇನೆ.

## ಕೃತಜ್ಞತೆಗಳು

ನಮ್ಮ ಸಂಸ್ಥೆಯ ಬೆಳವಣಿಗೆಯಲ್ಲಿ ಪಾಲ್ಗೊಂಡ ಎಲ್ಲ ಪಾಲಕರಿಗೂ ಪೋಷಕ-ರಿಗೂ ಹಾಗೂ ದಾನಿಗಳಿಗೂ ಹೃತ್ಪೂರ್ವಕ ಕೃತಜ್ಞತೆಗಳು. ನಮ್ಮ ಕಟ್ಟಡ ನಿರ್ಮಾಣ ಕಾರ್ಯಗಳಲ್ಲಿ ಧನಸಹಾಯ ಮಾಡಿದ ಹಾಗೂ ಮಾಡಲಿಚ್ಛಿಸುವ ದಾನಿಗಳಿಗೂ, ಸಂಘ ಸಂಸ್ಥೆಗಳಿಗೂ ಕೃತಜ್ಞತೆಗಳು. ಈ ಸಂಸ್ಥೆಯ ಅಭಿವೃದ್ಧಿಯಲ್ಲಿ ಆಸಕ್ತಿತೋರಿ, ಬೆನ್ನು ತಟ್ಟಿ ಸಹಾಯ ಹಸ್ತ ನೀಡುತ್ತಿರುವ ಮಾತೃ ಸಂಸ್ಥೆಯಾದ " ಕೆನರಾ ವೆಲ್‌ಫೇರ್ ಟ್ರಸ್ಟ " ಹಾಗೂ ಅದರ ಪದಾಧಿಕಾರಿಗಳಿಗೂ ನಮ್ಮ ಅನಂತ ಕೃತಜ್ಞತೆಗಳು.

2-2-2002

ವಿ. ವಿ. ಭಟ್ಟ
ಪ್ರಾಚಾರ್ಯರು
ಜನತಾ ವಿದ್ಯಾಲಯ ಪ. ಪೂ. ಕಾಲೇಜು, ಕಡತೋಕಾ.

# ಕೆನರಾ ವೆಲ್‌ಫೇರ್ ಟ್ರಸ್ಟ ಅಂಕೋಲಾ

ಸಂಸ್ಥಾಪಕ ಅಧ್ಯಕ್ಷರು

ದಿ. ಡಾ|| ದಿನಕರ ದೇಸಾಯಿ

ಆಡಳಿತ ಮಂಡಳಿ :

ಶ್ರೀ ಎಸ್. ಪಿ. ಕಾಮತ — ಅಧ್ಯಕ್ಷರು (ಟ್ರಸ್ಟಿ)

ಶ್ರೀ ವಿ. ಎನ್. ಪೈ — "

ಶ್ರೀಮತಿ ಉಷಾ ಪ್ರಧಾನ — "

ಪ್ರೊ. ಕೆ. ಜಿ. ನಾಯ್ಕ — "

ಪ್ರೊ. ಜಿ. ವಿ. ಭಟ್ಟ ಕೊಂಕೇರಿ — "

ಶ್ರೀ ಸಿ. ಎನ್. ಶೆಟ್ಟಿ — ಆಡಳಿತಾಧಿಕಾರಿಗಳು

## ಕಿರಿಯ ಕಾಲೇಜು ವಿಭಾಗದ ಸಿಬ್ಬಂದಿ ವರ್ಗ

ಶ್ರೀ ವಿ. ವಿ. ಭಟ್ಟ, ಎಂ ಎ. (ಅರ್ಥಶಾಸ್ತ್ರ) ಎಂ.ಎ. (ರಾಜ್ಯಶಾಸ್ತ್ರ) ಬಿ. ಎಡ್. — ಪ್ರಾಚಾರ್ಯರು

ಶ್ರೀ ಎಸ್. ಎಸ್. ಭಟ್ಟ, ಎಂ.ಎ. (ಇಂಗ್ಲೀಷ) ಎಂ.ಎ. (ರಾಜ್ಯಶಾಸ್ತ್ರ) ಬಿ. ಎಡ್. — ಉಪನ್ಯಾಸಕರು

ಶ್ರೀ ಜಿ. ಎಸ್. ಹೆಗಡೆ, ಬಿ.ಎಸ್‌ಸಿ., ಬಿ ಎಡ್., ಎಂ.ಎ., ಎಂ.ಎಡ್. — "

ಶ್ರೀ ಜಿ. ವಿ. ಭಟ್ಟ, ಎಂ ಎ. (ಸಂಸ್ಕೃತ) ಬಿ.ಎಡ್. ಸಂಸ್ಕೃತ ವಿದ್ವಾನ್ — "

ಶ್ರೀ ಸಿ. ಎಸ್ ಪ್ರಕಾಶ, ಬಿ.ಎಸ್‌ಸಿ , ಎಂ ಎಡ್. — "

ಶ್ರೀ ದಯಾನಂದ ಕೆ. ರಾಠೋಡ, ಎಂ. ಎ. — "

ಶ್ರೀ ಎಸ್. ಬಿ. ಗೌಡ, ಬಿ. ಎ. — ಕರಣಿಕರು

ಶ್ರೀಮತಿ ಸಾವಿತ್ರಿ ಆರ್. ಹೆಗಡೆ, ಬಿ.ಎ. — "

ಶ್ರೀ ಎಸ್. ಎನ್. ಕೋಡಿಬಾಗಿಲು — ಜವಾನ

ಶ್ರೀ ಎಸ್. ಎಂ. ಮುಕ್ರಿ — ಕಾವಲುಗಾರ

## -: ಹೈಸ್ಕೂಲ ವಿಭಾಗದ ಸಿಬ್ಬಂದಿ ವರ್ಗ :-

ಶ್ರೀ ಎನ್. ವಿ. ಬೀರಕೋಡಿ, ಬಿ.ಎಸ್‌ಸಿ., ಬಿ.ಎಡ್., ಬಿ.ಪಿ ಎಡ್. — ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್ I

ಶ್ರೀ ಜಿ. ಆರ್. ಭಟ್ಟ, ಬಿ.ಎಸ್‌ಸಿ., ಎಂ.ಎ , ಬಿ ಎಡ್. ರಾ. ಭಾಷಾ ಪ್ರವೀಣ — ಸಹ ಶಿಕ್ಷಕರು

ಶ್ರೀಮತಿ ಉಷಾ ಜಿ. ಭಟ್ಟ, ಬಿ.ಎ ,ಬಿ.ಎಡ್. — ,,

ಶ್ರೀ ಡಿ. ಎನ್. ವೈದ್ಯರು, ಬಿ.ಎ.,ಬಿ.ಎಡ್. — ,,

ಶ್ರೀಮತಿ ಗಿರಿಜಾ ಜಿ. ನಾಯ್ಕ, ಬಿ.ಎ ,ಬಿಎಡ್. — ,,

ಶ್ರೀ ಜಿ. ಆರ್. ಮಡಿವಾಳ, ಎಂ.ಎ., ಬಿ.ಎಡ್., ಎಚ್ ಡಿ. ರಾ. ಭಾಷಾ ಪ್ರವೀಣ — ವೃತ್ತಿ ಶಿಕ್ಷಕರು

ಶ್ರೀ ಎಸ್. ಎಂ. ಹೆಗಡೆ, ಬಿ.ಎ., ಬಿ ಎಡ್. — ಕರಣಿಕರು

ಶ್ರೀ ಎ. ಎನ್. ನಾಯ್ಕ, ಎಸ್.ಎಸ್.ಎಲ್.ಸಿ. — ಹಾಜರುವಾಸಿ

ಶ್ರೀ ಎಂ. ಡಿ. ಗೌಡ — ಪ್ಯೂನ್ ಕಂ. ವಾಚಮನ್

# ಶಾಲಾ ಸಂಸತ್ತು : ಪದವಿ-ಪೂರ್ವ ಕಾಲೇಜು ವಿಭಾಗ

## ಪದಾಧಿಕಾರಿಗಳು

-: 2001-2002 ರ ಸಂಸತ್ತು :-

1. ಪ್ರಧಾನಿ : **ಪ್ರದೀಪ ಎಸ್. ನಾಯ್ಕ** ದ್ವಿತೀಯ ಪಿ.ಯು.ಸಿ.

2. ಸ್ವಚ್ಛತೆ ಹಾಗೂ ಶಿಸ್ತು
   1. ಕುಮಾರ ಪ್ರದೀಪ ಎಸ್. ನಾಯ್ಕ ದ್ವಿತೀಯ ಪಿ.ಯು.ಸಿ.
   ಕುಮಾರಿ ಶಶಿಕಲಾ ಎಸ್. ನಾಯ್ಕ ಪ್ರಥಮ ''

3. ಮನರಂಜನೆ ಹಾಗೂ ಸಾಂಸ್ಕೃತಿಕ ವಿಭಾಗ
   1. ಕುಮಾರ ಎನ್. ವಿ. ಸತೀಶ ಪ್ರಥಮ ಪಿ.ಯು.ಸಿ.
   2. ಕುಮಾರಿ ಸಂಧ್ಯಾ ಎ. ರಾಯ್ಕರ್ ದ್ವಿತೀಯ ''

4. ಕ್ರೀಡಾ ವಿಭಾಗ
   1, ಕುಮಾರ ಗಜಾನನ ಎಸ್. ಕಟ್ಟೀಮನಿ ದ್ವಿತೀಯ ಪಿ.ಯು.ಸಿ.
   2. ಕುಮಾರಿ ಬಿಬಿ ನಾಜನೀನ್ ಜೆ. ಗನಿ ಪ್ರಥಮ ''

5. ಪತ್ರಿಕೆ ಹಾಗೂ ಪ್ರವಾಸ
   1, ಕುಮಾರ ಮಹೇಶ ವಿ. ನಾಯ್ಕ ದ್ವಿತೀಯ ಪಿ.ಯು.ಸಿ.
   2, ಕುಮಾರಿ ಶಿಲ್ಪಾ ಎಸ್. ನಾಯ್ಕ ಪ್ರಥಮ ''

6. ವಾಚನಾಲಯ ಹಾಗೂ ಚರ್ಚಾಕೂಟ
   1, ಕುಮಾರ ಕೃಷ್ಣ ಬಿ. ಗೌಡ ಪ್ರಥಮ ಪಿ.ಯು.ಸಿ.
   2, ಕುಮಾರಿ ಮಾಲತಿ ಆರ್. ನಾಯ್ಕ ದ್ವಿತೀಯ ''

7. ಸಮಾಜ ಸೇವೆ ಹಾಗೂ ಸಂಸತ್ತಿನ ಕಾರ್ಯಕಲಾಪ
   1, ಕುಮಾರ ದಿನೇಶ ಆರ್. ಪಟಗಾರ ಪ್ರಥಮ ಪಿ.ಯು.ಸಿ.
   2, ಕುಮಾರಿ ಸೀಮಾ ಶೇಟ್ ದ್ವಿತೀಯ ''

ಮಾರ್ಗದರ್ಶಕರು : **ಪ್ರೊ. ಸಿ. ಎಸ್. ಪ್ರಕಾಶ, ಶಿಕ್ಷಣ ಶಾಸ್ತ್ರ ಉಪನ್ಯಾಸಕರು.**

# ಹೈಸ್ಕೂಲು ವಿಭಾಗದ ವಿದ್ಯಾರ್ಥಿ ಸಂಘ

## 2001-2002

### —: ಸಂಸತ್ತಿನ ಪದಾಧಿಕಾರಿಗಳು :—

1. ಪ್ರಧಾನಿ : ಕುಮಾರ ಕೆ. ಎಸ್. ಗಿರೀಶ 10

2. ಮನರಂಜನೆ
   1. ಕುಮಾರ ಕೆ. ಸುಬ್ರಹ್ಮಣ್ಯ 10
   2. ಕುಮಾರಿ ಸಂಗೀತಾ ಗೋನ್ಸಾಲ್ವಿಸ್ 10

3. ಪತ್ರಿಕೆ
   1. ಕುಮಾರ್ ನಿತಿನ್ ಎಸ್. ಕಟ್ಟೀಮನಿ 9 ಎ
   2. ಕುಮಾರಿ ಮೇಘನಾ ಜಿ. ಹೆಗಡೆ 10

4. ವಾಚನಾಲಯ
   1. ಕುಮಾರ ಕೆ. ಎಸ್. ಷಣ್ಮುಖ 9 ಬಿ
   2. ಕುಮಾರ ಚಂದ್ರು ಮುಕ್ರಿ 10
   3. ಕುಮಾರಿ ರೇಷ್ಮಾ ರೇವಣ್ಕರ 9 ಬಿ

5. ಕ್ರೀಡಾ ವಿಭಾಗ
   1. ಕುಮಾರ ಸುರೇಶ ಡಿ. ಮರಾಠೆ 9 ಎ
   2. ಕುಮಾರಿ ವೀಣಾ ವಿ. ನಾಯ್ಕ 10
   3. ಕುಮಾರಿ ರೂಪಾ ಎಸ್. ನಾಯ್ಕ 9 ಬಿ

6. ಸಮಾಜ ಸೇವೆ
   1. ಕುಮಾರ ಸುಬ್ರಹ್ಮಣ್ಯ ಜಿ ಭಟ್ಟ 9 ಬಿ
   2. ಕುಮಾರಿ ಸರೋಜಾ ಪಿ. ಭಟ್ಟ 9 ಎ

7. ಚರ್ಚಾಕೂಟ
   1. ಕುಮಾರ ಮಧುಸೂದನ ಭಂಡಾರಿ 8 ಬಿ
   2. ಕುಮಾರಿ ಶ್ರುತಿ ಎ ಹೆಗಡೆ 8 ಎ

8. ಪುಸ್ತಕಾಲಯ
   1. ಕುಮಾರ ಆನಂದ ಜಿ. ಭಟ್ಟ 8 ಎ
   2. ಕುಮಾರಿ ಪಾವನಾ ಡಿ. ಭಟ್ಟ 8 ಎ
   3. ಕುಮಾರಿ ನಯನಾ ಎಂ. ಶೆಟ್ಟಿ 9 ಬಿ

9. ಪ್ರವಾಸ
   1. ಕುಮಾರ ಪ್ರಸನ್ನ ಎಸ್. ಹೆಗಡೆ 8 ಬಿ
   2. ಕುಮಾರ ಸುಮಂತ ಕೆ. ಎಸ್. 9 ಎ
   3. ಕುಮಾರಿ ರಶ್ಮಿ ಮಧುಕರ ಹೆಗಡೆ 8 ಬಿ
   4. ಕುಮಾರಿ ರೇಖಾ ರಾಮಚಂದ್ರ ನಾಯ್ಕ 8 ಬಿ

ಮಾರ್ಗದರ್ಶಕರು : ಶ್ರೀಮತಿ ಗಿರಿಜಾ ಜಿ. ನಾಯ್ಕ, ಕನ್ನಡ ಅಧ್ಯಾಪಕಿ.

ಜ

ನಮ್ಮ ಶಾಲೆಯ

| ವರ್ಷ |
|---|
| 1962-63 |
| 1963-64 |
| 1964-65 |
| 1965-66 |
| 1966-67 |
| 1967-68 |
| 1968-69 |
| 196[illegible]-70 |
| 1970-71 |
| 1971-72 |
| 1972-73 |
| 1973-74 |
| 1974-75 |
| 1975-76 |
| 1976-77 |
| 1977-78 |
| 1978-79 |
| 1979-80 |
| 1980-81 |
| 1981-82 |
| 1982-83 |
| 1983-84 |
| 1984-85 |
| 1985-86 |
| 1986-87 |
| 1987-88 |
| 1988-89 |

## ಜ್ಞಾನ ಜ್ಯೋತಿಯ ಕಿರಣಗಳು

### ನಮ್ಮ ಶಾಲೆಯ ಎಸ್. ಎಸ್. ಎಲ್. ಸಿ ಪರೀಕ್ಷೆಯಲ್ಲಿ ಪ್ರತಿವರ್ಷ ಮೊದಲನೆಯ ಸ್ಥಾನ ಪಡೆದವರು

| ವರ್ಷ | ಹೆಸರು | ಪ್ರತಿಶತ |
|---|---|---|
| 1962-63 | ಈಶ್ವರ ದೆ. ಶೆಟ್ಟಿ | 78.82 |
| 1963-64 | ಪ್ರಭಾಕರ ನಾ. ಭಟ್ಟ | 70.23 |
| 1964-65 | ಉಮಾಮಹೇಶ್ವರ ಶ. ಭಟ್ಟ | 76.11 |
| 1965-66 | ಗಣಪತಿ ದೇ. ಭಟ್ಟ | 77.88 |
| 1966-67 | ಗಣಪತಿ ಸು. ಹೆಗಡೆ | 67.88 |
| 1967-68 | ವಿಜಯ ಶಂ. ಭಟ್ಟ | 66.23 |
| 1968-69 | ದಿವಾಕರ ವಿ. ಭಟ್ಟ | 77.17 |
| 1969-70 | ಜನಾರ್ಧನ ಕೃ. ಹೆಗಡೆ | 66.94 |
| 1970-71 | ನಾರಾಯಣ ಗಜಾನನ ಭಟ್ಟ | 76.16 |
| 1971-72 | ಹೊಳೆಪ್ಪಾ ರಾ. ಅನಗೋಳಕರ | 72.83 |
| 1972-73 | ಶ್ರೀಪಾದ ಕೃ. ಭಟ್ಟ | 78.50 |
| 1973-74 | ಕೃಷ್ಣ ಜಿ. ಭಟ್ಟ | 72.83 |
| 1974-75 | ರವೀಂದ್ರ ಗ. ಭಟ್ಟ | 80.50 |
| 1975-76 | ಗಣೇಶ ರಾ. ಭಟ್ಟ | 70.66 |
| 1976-77 | ಗಣಪತಿ ರಾ. ಭಟ್ಟ | 74. |
| 1977-78 | ಗಣೇಶ ಜಿ. ಭಟ್ಟ | 77.50 |
| 1978-79 | ಪ್ರಕಾಶ ಜಿ. ಭಟ್ಟ | 86.50 |
| 1979-80 | ವನಿತಾ ಕೆ. ಕಾಮತ | 78.16 |
| 1980-81 | ವೀಣಾ ಆರ್. ಶಾನಭಾಗ | 79.33 |
| 1981-82 | ಸುಬ್ರಾಯ ಡಿ. ಹೆಗಡೆ | 77.83 |
| 1982-83 | ಸುಬ್ರಾಯ ಎಸ್. ಹೆಗಡೆ | 77.33 |
| 1983-84 | ಸುರೇಶ ಸೀತಾರಾಮ ಹೆಗಡೆ | 84.16 |
| 1984-85 | ಸುಭಾಸಚಂದ್ರ ಗಜಾನನ ಭಟ್ಟ | 86. |
| 1985-86 | ರಾಘವೇಂದ್ರ ಸುಬ್ರಾಯ ಭಟ್ಟ | 77.66 |
| 1986-87 | ಉಮಾಪತಿ ನ. ಹೆಗಡೆ | 86.66 |
| 1987-88 | ಗಣಪತಿ ಪರಮೇಶ್ವರ ಭಟ್ಟ ಯಾಲಕ್ಕಿ | 82. |
| 1988-89 | ಸಾವಿತ್ರಿ ದೇವರು ದೇವರು ಹೆಗಡೆ | 82.50 |

| | | |
|---|---|---|
| 1989-90 | ಬಿ. ಎಸ್. ಸುಭಾಸಕುಮಾರ | 78.16 |
| 1990-91 | ಅಶೋಕ ಗಜಾನನ ಭಟ್ಟ | 83.83 |
| 1991-92 | ರವಿ ಎಲ್. ವೈದ್ಯ | 86.50 |
| 1992-93 | ಚಿತ್ರಾಂಗದಾ ಎನ್. ಜೋಶಿ | 81.12 |
| 1993-94 | ನಾಗರತ್ನ ಎಸ್. ಭಟ್ಟ | 81.28 |
| 1994-95 | ಮಧುಕರ ಎಂ. ಶೇಟ | 87.04 |
| 1995-96 | ಗಂಗಾಂಬಿಕಾ ಎಂ. ಹೆಗಡೆ | 87.20 |
| 1996-97 | ಎಂ. ಮಂಜುನಾಥ | 90.08 |
| 1997-98 | ಎಚ್. ವಿ. ಪ್ರಶಾಂತ | 87.20 |
| 1998-99 | ವಿಜಲಕ್ಷ್ಮಿ ಭಟ್ಟ | 86.20 |
| 1999-2000 | ಕೆ. ಕೆ. ವಿನಯಮೂರ್ತಿ | 92.64 |
| 2000-01 | I ವೀಣಾಕುಮಾರಿ ಎಸ್. ಹೆಗಡೆ | 91.26 |
| | II ಎಸ್. ಮಹೇಶ | 91.26 |

## ನಮ್ಮ ವಿದ್ಯಾಲಯದ ಪಿ. ಯು. ಸಿ. ಪರೀಕ್ಷೆಯಲ್ಲಿ ಪ್ರತಿವರ್ಷ ಮೊದಲನೆಯ ಸ್ಥಾನ ಪಡೆದವರು

| ವರ್ಷ | ಹೆಸರು | ಪ್ರತಿಶತ |
|---|---|---|
| 1970-71 | ಸತ್ಯನಾರಾಯಣ ಶಂಭು ಹೆಗಡೆ | 61 |
| 72-73 | ಉಮಾಬಾಯಿ ಸ. ಭಟ್ಟ | 63 |
| 73-74 | ಸಂಧ್ಯಾ ಎನ್. ಭಟ್ಟ | 66.50 |
| 74-75 | ಶಾರದಾ ಪಿ. ಭಟ್ಟ | 63.50 |
| 75-76 | ಭಾಸ್ಕರ ಗ. ಭಟ್ಟ | 64.83 |
| 76-77 | ರಾಧಾಕೃಷ್ಣ ಡಿ. ಪೈ | 61.50 |
| 77-78 | ಸತ್ಯನಾರಾಯಣ ಆರ್. ಭಟ್ಟ | 64.50 |
| 78-79 | ಭಾಸ್ಕರ ಎನ್. ಭಟ್ಟ | 67.33 |
| 79-80 | ವೆಂಕಟಾಚಲ ಕೆ. ಭಟ್ಟ | 66.50 |
| 80-81 | ಪ್ರತಿಭಾ ಎಂ. ಭಾಗ್ವತ | 69.83 |
| 81-82 | ಮಂಗಲಾ ಎಂ. ಹೆಗಡೆ | 69.66 |
| 82-83 | ಆಶಾಲತಾ ಕೆ. ಭಟ್ಟ | 69.66 |
| 83-84 | ಗೀತಾ ಆರ್. ಭಟ್ಟ | 69.50 |
| 84-85 | ಜಗದೀಶ ಹಬ್ಬು | 73 |

| | | |
|---|---|---|
| 1985-86 | ಸರಸ್ವತಿ ಸುಬ್ರಾಯ ಹೆಗಡೆ | 72.66 |
| 86-87 | ಸುಧಾ ರಾಮಕೃಷ್ಣ ಭಟ್ಟ | 73.66 |
| 87-88 | ದತ್ತಾತ್ರಯ ಎಸ್. ಹೆಗಡೆ | 73.16 |
| 88-89 | ಗಣಪತಿ ಸುಧಾಕರ ಭಟ್ಟ | 77.83 |
| 89-90 | ಶಂಕರ ಎಸ್. ಮಡಿವಾಳ | 73.16 |
| 90-91 | ಅನಿತಾ ಪಿ. ದೇಶಭಂಡಾರಿ | 78 |
| 91-92 | ಜಯಾ ಆರ್. ಭಟ್ಟ | 67.66 |
| 92-93 | ರಾಘವೇಂದ್ರ ಕೆ. ಭಟ್ಟ | 73.33 |
| 93-94 | ಭಾಗ್ಯಲತಾ ವಿ. ಹೆಗಡೆ | 79.69 |
| 94-95 | ವಿಜಯಾ ಶಂ. ಶಾನಭಾಗ | 78 |
| 95-96 | ಭಾರತಿ ಎನ್. ನಾಯ್ಕ | 79.90 |
| 96-97 | ಮಾನಸ ಎಸ್. ಹೆಗಡೆ | 82.50 |
| 97-98 | ನಾಗರತ್ನ ಪಿ. ನಾಯ್ಕ | 81.17 |
| 98-99 | ಮುಕ್ತಾ ಮಂಜುನಾಥ ಭಟ್ಟ | 80.09 |
| 99-2000 | ಕೆ. ಕೆ. ಮೇಧಾ | 88.66 |
| 2000-01 | ಸುಜಾತಾ ಶ್ರೀಧರ ಹೆಗಡೆ | 84.06 |



# ವಿಶೇಷ ಉಪಕಾರ ಸ್ಮರಣೆ



ಕಡತೋಕಾ ಗ್ರಾಮದ ಶ್ರೀ ಶಂಭು ಗಣಪತಿ ಹೆಗಡೆ ಮತ್ತು ಶ್ರೀಮತಿ ಪರಮೇಶ್ವರಿ ಹೆಗಡೆ (ಗಾಳಿಮನೆ) ಅವರ ಸತ್ಪುತ್ರರಾದ **ಶ್ರೀ ವಿಷ್ಣು ಶಂಭು ಹೆಗಡೆ** ಅವರು ವಾಪಿಯಲ್ಲಿಯ ಪ್ರಸಿದ್ಧ ಕಂಪನಿಯೊಂದರಲ್ಲಿ ಮೇನೇಜರ್ ಆಗಿ ಕೆಲಸ ನಿರ್ವಹಿಸುತ್ತಿದ್ದು ಶ್ರೀಯುತರು ತಮ್ಮ ಮಾತೋಶ್ರೀಯವರಾದ **ದಿ|| ಪರಮೇಶ್ವರಿ ಹೆಗಡೆ** ಅವರ **ಸ್ಮರಣಾರ್ಥ** ನಮ್ಮ ಕಾಲೇಜಿನ ಕೊಠಡಿಯೊಂದರ ನಿರ್ಮಾಣಕ್ಕಾಗಿ ಒಂದು ಲಕ್ಷಕ್ಕೂ ಹೆಚ್ಚಿನ ಮೊತ್ತದ ಹಣವನ್ನು ಕೊಟ್ಟು ಉಪಕರಿಸಿರುವುದರ ಜೊತೆಗೆ ಈಗ ನಿರ್ಮಿಸುತ್ತಿರುವ ಗ್ರಂಥಾಲಯ-ಮಾಹಿತಿಜ್ಞಾನ ಕೋಣೆಯ ನಿರ್ಮಾಣಕ್ಕಾಗಿಯೂ ದೊಡ್ಡ ಮೊತ್ತದ ಧನಸಹಾಯ ಮಾಡಿರುತ್ತಾರೆ.

ನಮ್ಮ ವಿದ್ಯಾಲಯದ ಪೂರ್ವ ವಿದ್ಯಾರ್ಥಿಯಾದ **ಶ್ರೀಯುತ ವಿ. ಎಸ್. ಹೆಗಡೆ (ಗಾಳಿ)** ಅವರು ಸಜ್ಜನರು, ದಕ್ಷರು, ದಾನಶೀಲ ವ್ಯಕ್ತಿಗಳೂ ಆಗಿದ್ದು ಅವರ ಉಪಕಾರ ಸ್ಮರಿಸುತ್ತಾ, ನಮ್ಮ ವಿದ್ಯಾಲಯ ಹಾರ್ದಿಕ ಕೃತಜ್ಞತೆಯನ್ನು ಸಲ್ಲಿಸುವುದರ ಜೊತೆಗೆ ಅವರ ಶ್ರೇಯಸ್ಸನ್ನು ಬಯಸುತ್ತದೆ.

**ವಿ. ವಿ. ಭಟ್ಟ**
ಪ್ರಾಚಾರ್ಯರು
ಜನತಾ ವಿದ್ಯಾಲಯ ಸಂ. ಪ. ಪೂ. ಕಾಲೇಜು
ಕಡತೋಕಾ.

# ಶಿಕ್ಷಣದಲ್ಲಿ ಮೌಲ್ಯಮಾಪನ

**ಮೌಲ್ಯಮಾಪನ ಎಂದರೇನು ?**

" ಉದ್ದೇಶ ಹಾಗೂ ಸನ್ನಿವೇಶಕ್ಕೆ ಯುಕ್ತವಾದ ತಂತ್ರ ಬಳಸಿ ದೊರೆತ ಮಾಹಿತಿಗಳನ್ನು ವ್ಯವಸ್ಥಿತವಾಗಿ ಕ್ರೋಢೀಕರಿಸಿ, ವಸ್ತುನಿಷ್ಠ ಮಾನದಂಡದೊಡನೆ ಹೋಲಿಸಿ, ದತ್ತ ವಸ್ತು, ವ್ಯಕ್ತಿ ಅಥವಾ ಅಂಶದ ಪರಿಮಾಣ ಹಾಗೂ ಗುಣವನ್ನು ನಿಷ್ಕರ್ಷಿಸುವ ವೈಜ್ಞಾನಿಕ ಕಾರ್ಯವೇ ಮೌಲ್ಯಮಾಪನ."

ಮೌಲ್ಯಮಾಪನದಲ್ಲಿ ಅನುಸರಿಸಲ್ಪಡುವ ನಿರ್ದಿಷ್ಟ ತತ್ವಗಳು ಅದನ್ನು ವೈಜ್ಞಾನಿಕವಾಗಿಸುತ್ತದೆ.

ಮೌಲ್ಯಮಾಪನದಲ್ಲಿ ಪರಿಮಾಣದೊಂದಿಗೆ ಗುಣವನ್ನೂ ಪರಿಗಣಿಸಲಾಗುತ್ತದೆ. ಅಕ್ಕಿ ಖರೀದಿಸುವಾಗ ನಿರ್ದಿಷ್ಟ ಪರಿಮಾಣದ ಒಳ್ಳೆಯ ಅಕ್ಕಿಯನ್ನು ಆಯ್ಕೆ ಮಾಡುವ ಸನ್ನಿವೇಶದಲ್ಲಿ ಮೌಲ್ಯಮಾಪನ ನಡೆಯುತ್ತದೆ.

ಮೌಲ್ಯಮಾಪನದಲ್ಲಿ ಅಳತೆಯ ಎಲ್ಲ ತಂತ್ರಗಳೂ ಬಳಸಲ್ಪಡುತ್ತವೆ. ರೇಡಿಯೋ ಖರೀದಿಸುವಾಗ, ಅನುಭವಿಕರ ಅಭಿಪ್ರಾಯ, ಕಂಪನಿ ಒದಗಿಸುವ ವಿವರ, ರೇಡಿಯೋ ಹಾಕಿ ಕೇಳುವ ಎಲ್ಲ ತಂತ್ರಗಳನ್ನೂ ಬಳಸಲಾಗುತ್ತದೆ.

ಮೌಲ್ಯಮಾಪನದಲ್ಲಿ ವಸ್ತುನಿಷ್ಠವೂ ಸರ್ವಸಮ್ಮತವೂ ಆದ ಮಾನದಂಡ ಬಳಸಲ್ಪಡುತ್ತದೆ. ಬಟ್ಟೆ ಖರೀದಿಸುವಾಗ ಗೇಣು, ಮೊಳ ಬಳಸದೆ ಮೀಟರ್ ಅಳತೆಯನ್ನೇ ಬಳಸಲಾಗುತ್ತದೆ.

ಉದ್ದೇಶ ಹಾಗೂ ಸನ್ನಿವೇಶಕ್ಕೆ ಯುಕ್ತವಾದ ತಂತ್ರವನ್ನೇ ಮೌಲ್ಯಮಾಪನದಲ್ಲಿ ಬಳಸಲಾಗುತ್ತದೆ. ಅಕ್ಕಿ ಕೊಳ್ಳುವಾಗ ರುಚಿ ವಾಸನೆ ನೋಡಿದರೆ, ರೇಡಿಯೋ ಕೊಳ್ಳುವಾಗ ಆ ತಂತ್ರ ಬಳಸದೆ ಬೇರೆ ತಂತ್ರ ಬಳಸಲಾಗುತ್ತದೆ. ಅಕ್ಕಿ ಖರೀದಿಯಲ್ಲಿ ಕಿ. ಗ್ರಾಂ. ಬಳಸಿದರೆ ಬಟ್ಟೆ ಖರೀದಿಯಲ್ಲಿ ಮೀಟರ್ ಬಳಸಲಾಗುತ್ತದೆ.

ಮೌಲ್ಯಮಾಪನದಲ್ಲಿ ಮಾಹಿತಿ ಸಂಗ್ರಹಿಸುವದರೊಂದಿಗೆ ಕರಾರುವಕ್ಕಾಗಿ ತೀರ್ಮಾನ ಕೈಕೊಳ್ಳುವ ಕಾರ್ಯವೂ ನಡೆಯುತ್ತದೆ. ವರ್ಗದ ಕೋಣೆಯ ಕ್ಷೇತ್ರ ಅಳೆದ ಮೇಲೆ ಅದು ವರ್ಗದಲ್ಲಿ ದಾಖಲಾದ ವಿದ್ಯಾರ್ಥಿಗಳಿಗೆ ಚಿಕ್ಕದೋ, ದೊಡ್ಡದೋ ಎಂಬ ನಿರ್ಧಾರವನ್ನೂ ಕೈಕೊಳ್ಳಲಾಗುತ್ತದೆ.

ಮೌಲ್ಯಮಾಪನದಲ್ಲಿ ಹಿಂದಿನ ಹಾಗೂ ಮುಂದಿನ ಸಂಗತಿಗಳೂ ಗಮನಿಸಲ್ಪಡುತ್ತದೆ. ಬಟ್ಟೆಯ ಆಯ್ಕೆಯಲ್ಲಿ ಅದು ಎಲ್ಲಿ, ಯಾವಾಗ, ಯಾರಿಂದ, ಹೇಗೆ ತಯಾರಿಸಲ್ಪಟ್ಟಿತು ಎನ್ನುವದನ್ನು ಗಮನಿಸುವದರೊಡನೆ ಭವಿಷ್ಯದಲ್ಲಿ ಅದರ ಬಾಳಿಕೆ ಉಪಯೋಗದ ಕುರಿತೂ ಚಿಂತಿಸಲಾಗುತ್ತದೆ.

ಮೌಲ್ಯಮಾಪನ ವ್ಯಾಪಕ ಹಾಗೂ ಸಮಗ್ರವಾದ ಕಾರ್ಯ. ಗಡಿಯಾರ ಕೊಳ್ಳುವಾಗ ಅದರ ಡೈಲು, ಕೇಸು, ಬೆಲ್ಟು, ಶಬ್ದ, ಒಳಗಿನ ಯಂತ್ರ ಎಲ್ಲವನ್ನೂ ಗಮನಿಸುವದರೊಡನೆ ಒಟ್ಟಾರೆ ಅದರ ತೋರುವಿಕೆಯನ್ನೂ ವಿಚಾರಿಸಲಾಗುತ್ತದೆ.

ನಿಯಮಾನುಸಾರ ಯಾವುದೇ ವಸ್ತುವಿಗೆ ಸಾಂಖ್ಯಿಕ ರೂಪ ನೀಡುವದೇ ಅಳತೆ. ಅಳತೆ ಮೌಲ್ಯಮಾಪನದ ಒಂದು ಭಾಗವಾದರೂ ಅಳತೆ ಅಂದರೆ ಮೌಲ್ಯಮಾಪನ ಅಲ್ಲ. ಅಳತೆಯ ಕಾರ್ಯದಲ್ಲಿ ಮೌಲಿಕ ತೀರ್ಮಾನ ನಡೆಯುವದಿಲ್ಲ. ಅಳತೆ ಪುರಾತನ ಪರಿಕಲ್ಪನೆಯಾದರೆ ಮೌಲ್ಯಮಾಪನ ಅತ್ಯಾಧುನಿಕ ಪರಿಕಲ್ಪನೆ, ಮೌಲ್ಯಮಾಪನ ಅಳತೆಗಿಂತ ಹೆಚ್ಚು ಸಂಕೀರ್ಣ,ವಿಶಾಲ ಅರ್ಥ ಹಾಗೂ ವ್ಯಾಪ್ತಿಯುಳ್ಳ ಪರಿಕಲ್ಪನೆಯಾಗಿದೆ. ಅಳತೆ ಕೇವಲ ಪರಿಮಾಣಾತ್ಮಕ ಪರಿಕಲ್ಪನೆಯಾದರೆ ಮೌಲ್ಯಮಾಪನದಲ್ಲಿ ಪರಿಮಾಣದೊಂದಿಗೆ ಗುಣವೂ ಮಹತ್ವ. ಅಳತೆ ಮೌಲ್ಯಮಾಪನವನ್ನು ಅವಲಂಭಿಸಬೇಕಿಲ್ಲ ಆದರೆ ಮೌಲ್ಯಮಾಪನ ಅಳತೆಯನ್ನೇ ಅವಲಂಭಿಸಬೇಕಾಗುತ್ತದೆ. ಅಳತೆ ಕೇವಲ ವರ್ತಮಾನದ ಸ್ಥಿತಿಗೆ ಸಂಬಂಧಿಸಿದ್ದರೆ ಮೌಲ್ಯಮಾಪನದಲ್ಲಿ ಪೂರ್ವೇತಿಹಾಸ ಭವಿಷ್ಯದ ಪರಿಗಣನೆಯ ಅಂಶವಾಗಿರುತ್ತದೆ. ಲೌಕಿಕವಾಗಿ ಮೌಲ್ಯಮಾಪನ ಅಳತೆಗಿಂತ ಕಡಿಮೆ ವಸ್ತುನಿಷ್ಠವಾದದ್ದು. ಅಳತೆಯ ಉದ್ದೇಶ ವಿವರ ಸಂಗ್ರಹವಾದರೆ ಮೌಲ್ಯಮಾಪನದ ಉದ್ದೇಶ ವಿವರ ಸಂಗ್ರಹದೊಂದಿಗೆ ನಿರ್ಣಯವನ್ನೂ ಕೈಕೊಳ್ಳುವದಾಗಿದೆ. ಅಳತೆಯಲ್ಲಿ ಅಳೆಯುವ ಅಂಶ ಮಾತ್ರ ಮಹತ್ವದ್ದು. ಆದರೆ ಮೌಲ್ಯಮಾಪನದಲ್ಲಿ ಅಳೆಯುವ ಅಂಶದೊಂದಿಗೆ ಅಳತೆಯ ಉದ್ದೇಶ, ಗುರಿ, ಸನ್ನಿವೇಶಗಳೂ ಮಹತ್ವದ್ದಾಗಿದೆ. ಒಟ್ಟಿನಲ್ಲಿ-

ಮೌಲ್ಯಮಾಪನ- ಅಳತೆ + ಮೌಲಿಕ ತೀರ್ಮಾನ

**ಶಿಕ್ಷಣದಲ್ಲಿ ಮೌಲ್ಯಮಾಪನ**

ಮಾನ್ಯ ಸಿ. ಎಂ. ಬ್ರೌನರ ಅಭಿಪ್ರಾಯದಲ್ಲಿ "ಮೌಲ್ಯಮಾಪನ ಶಿಕ್ಷಣದಲ್ಲಿ ಗುರಿಯನ್ನು ಸೂತ್ರೀಕರಿಸುವ ಒಂದು ಅಂತ್ಯವಿಲ್ಲದ ನಿರಂತರ ಕಾರ್ಯ. ಇದು ಗುರಿಯ ಕಡೆಗೆ ಶಿಕ್ಷಣ ಕಾರ್ಯದ ಪ್ರಗತಿ ಅಳೆಯುವ ಪ್ರಯತ್ನ. ಹೊಸ ಅಂಶಗಳನ್ನು ಅಳವಡಿಸಿ ನವೀನ ಗುರಿ ನಿರ್ಧರಿಸುವ ಕಾಯಕ. ಶಿಕ್ಷಣ ಕಾರ್ಯದ ಪ್ರಗತಿಯನ್ನು ವಸ್ತುನಿಷ್ಠ, ಪ್ರಮಾಣಬದ್ಧ ಆಧಾರಗಳಿಂದ ತಿಳಿಯುವ ಕಾರ್ಯ ಇದು. ನಿರ್ದಿಷ್ಟ ಮೌಲ್ಯ, ಆದರ್ಶಗಳನ್ನು ಹೊಂದಿ, ದತ್ತ ಸನ್ನಿವೇಶಕ್ಕೆ ಸಂಬಂಧಿಸಿದ ಸಾಕ್ಷಾಧಾರಗಳನ್ನು ಅರ್ಥೈಸಿ ನಿರ್ಣಯ ಕೈಕೊಳ್ಳುವ ಕಾರ್ಯ ಇಲ್ಲಿ ನಡೆಯುತ್ತದೆ."

ಭಾರತೀಯ ಶಿಕ್ಷಣ ಆಯೋಗದ ವರದಿಯಲ್ಲಿ ಆಯೋಗದ ಅಧ್ಯಕ್ಷ ಮಾನ್ಯ ಕೊಠಾರಿಯವರು ವ್ಯಾಖ್ಯಾನಿಸಿದಂತೆ– "ಶಿಕ್ಷಣದಲ್ಲಿ ಮೌಲ್ಯಮಾಪನ ಒಂದು ನಿರಂತರ ಕಾರ್ಯ. ಶಿಕ್ಷಣದ ಅಖಂಡ ವ್ಯವಸ್ಥೆಯ ಅವಿಭಾಜ್ಯ ಅಂಗ ಇದು. ಶಿಕ್ಷಣದ ಗುರಿಗಳೊಡನೆ ಸಂಬಂಧ ಹೊಂದಿದ ಮಗುವಿನ ಕಲಿಕೆ, ಶಿಕ್ಷಕನ ಬೋಧನೆಗಳ ಮೇಲೆ ಗಮನಾರ್ಹ ಪರಿಣಾಮ ಬೀರುತ್ತದೆ. ಮಗುವಿನ ಸಾಧನೆ ಅಳೆಯುವದು ಮಾತ್ರವಲ್ಲ ಅದನ್ನು ಸುಧಾರಿಸುವ ಆಶಯವನ್ನೂ ಹೊಂದಿದೆ ಇದು ಶಿಕ್ಷಣಾರ್ಥಿಯ ವ್ಯಕ್ತಿತ್ವದ ಸಮಗ್ರ ವಿಕಾಸವನ್ನು ನಿಷ್ಕರ್ಷಿಸುವ ಒಂದು ಸಂಯೋಜಿತ ಪ್ರಯತ್ನವಾಗಿದೆ.

ಸರಳವಾಗಿ ಅರ್ಥೈಸುವದಾದರೆ " ಶಿಕ್ಷಣ ಸಂಸ್ಕಾರ ಕೊಡುವದರ ಮೂಲಕ ಮಗುವಿನಲ್ಲಿ ಅಪೇಕ್ಷಿಸುವ ವರ್ತನಾ ಬದಲಾವಣೆ ಹಾಗೂ ಶಿಕ್ಷಣ ಸಂಸ್ಕಾರ ಪಡೆದ ಮೇಲೆ ಮಗುವಿನಲ್ಲಿ ಉಂಟಾದ ವಾಸ್ತವಿಕ ವರ್ತನಾ ಬದಲಾವಣೆಗಳ ನಡುವಿನ ಅಂತರವನ್ನು ನಿಷ್ಕರ್ಷಿಸುವ ಕಾರ್ಯವೇ ಶಿಕ್ಷಣದಲ್ಲಿ ಮೌಲ್ಯಮಾಪನವಾಗಿದೆ."

**ಶಿಕ್ಷಣದಲ್ಲಿ ಮೌಲ್ಯಮಾಪನದ ಗುರಿ ಉದ್ದೇಶಗಳು-**

ನಿರ್ಧಾರವಾದ ನಿರ್ದಿಷ್ಟ ಗುರಿಯೆಡೆಗೆ ಶಿಕ್ಷಣ ವ್ಯವಸ್ಥೆ ಸಾಧಿಸಿದ ಪ್ರಗತಿಯನ್ನು ನಿಯತಕಾಲಿಕವಾಗಿ ನಿಷ್ಕರ್ಷಿಸಬಹುದು.

ಮಗುವಿನ ಅಭಿವೃದ್ಧಿಯಲ್ಲಿ ಆಕಾಂಕ್ಷಿಗಳಾದ ಎಲ್ಲರಿಗೂ ಮಾರ್ಗದರ್ಶನ ಮಾಡಲು ಅಗತ್ಯ ಮಾಹಿತಿ ಪೂರೈಸುವದು.

ಶಿಕ್ಷಣ ಸಂಸ್ಕಾರ ಕೊಡುವದರ ಮೂಲಕ ಶಿಕ್ಷಣಾರ್ಥಿಯಲ್ಲಿ ಅಪೇಕ್ಷಿಸುವ ವರ್ತನಾ ಬದಲಾವಣೆ ಹಾಗೂ ಸಂಸ್ಕಾರಕೊಟ್ಟ ಮೇಲೆ ಶಿಕ್ಷಣಾರ್ಥಿಯಲ್ಲಿ ಉಂಟಾದ ವಾಸ್ತವಿಕ ವರ್ತನಾ ಬದಲಾವಣೆಗೂ ಇರುವ ಅಂತರ ನಿಷ್ಕರ್ಷಿಸುವದು.

ಮಗುವಿನ ಅವಶ್ಯಕತೆ ಹಾಗೂ ಸಾಧ್ಯತೆ ಅರಿಯುವದು ಮಗುವಿನ ಕಲಿಕೆಯಲ್ಲಿ ಕಂಡುಬರಬಹುದಾದ ನೈಧಾನಿಕತೆಯನ್ನು ಕಂಡುಹಿಡಿದು ಅದಕ್ಕೆ ಯುಕ್ತವಾದ ಪರಿಹಾರ ಕಾರ್ಯಕ್ರಮ ಏರ್ಪಡಿಸುವದು.

ಶಿಕ್ಷಕನ ಬೋಧನೆಯ ಪರಿಣಾಮ ಹಾಗೂ ಮಗುವಿನ ಕಲಿವಿನ ಸಾಧನೆ ನಿಷ್ಕರ್ಷಿಸಿ ಅದನ್ನು ಸುಧಾರಿಸುವ ಪ್ರಯತ್ನ ಮಾಡುವದು.

ಶಿಕ್ಷಣಕ್ಕೆ ನಿರ್ಧಾರವಾದ ಗುರಿಯ ಸಮಂಜಸತೆ, ವಿಶ್ವಾಸಾರ್ಹತೆ ಹಾಗೂ ವಸ್ತುನಿಷ್ಠತೆಯನ್ನು ಪರೀಕ್ಷಿಸಿ ಅಗತ್ಯವಿದ್ದಲ್ಲಿ ಶಿಕ್ಷಣದ ಗುರಿಯನ್ನು ಪುನರ್ ಸೂತ್ರೀಕರಿಸುವದು.

ಶಿಕ್ಷಣದ ಆಡಳಿತಗಾರರಿಗೆ ಅಗತ್ಯ ಮಾಹಿತಿ ಒದಗಿಸುವದು.

ಶಿಕ್ಷಣದ ಯೋಜಕರಿಗೆ ಅಗತ್ಯವಾದ ಆಧಾರಾಂಶಗಳನ್ನು ಪೂರೈಸುವದು.

ಶೈಕ್ಷಣಿಕ ಸಂಶೋಧನೆ ಕೈಕೊಂಡು ತನ್ಮೂಲಕ ಶಿಕ್ಷಣದ ಗುಣಮಟ್ಟ ಎತ್ತರಿಸುವದು.

ಶಿಕ್ಷಣದ ಮೌಲ್ಯಮಾಪನದ ಗುರಿ ಹಾಗೂ ಉದ್ದೇಶಗಳನ್ನು ಪರಿಗಣಿಸಿದಾಗ ಅದರಲ್ಲಿ ನಿಯೋಜನ ಮೌಲ್ಯಮಾಪನ, ರೂಪಣಾವಧಿಯ ಮೌಲ್ಯಮಾಪನ, ನೈದಾನಿಕ ಮೌಲ್ಯಮಾಪನ, ಸಂಕಲನಾತ್ಮಕ ಮೌಲ್ಯಮಾಪನ ಎಂಬ ನಾಲ್ಕು ಪ್ರಕಾರಗಳನ್ನು ಕಾಣಬಹುದಾಗಿದೆ.

ಒಂದು ಘಟಕ, ಅಧ್ಯಾಯ ಅಥವಾ ತರಗತಿಗೆ ಬೋಧನೆಯ ಪೂರ್ವದಲ್ಲಿ ವಿದ್ಯಾರ್ಥಿಯ ಯೋಗ್ಯತೆ, ಅರ್ಹತೆ ಅಥವಾ ಕಲಿವಿನ ಮಟ್ಟ ನಿರ್ಧರಿಸುವ ಮೌಲ್ಯಮಾಪನವೇ ನಿಯೋಜನ ಮೌಲ್ಯಮಾಪನ.

ಶೈಕ್ಷಣಿಕ ವರ್ಷದ ಆರಂಭದಿಂದ ವರ್ಷಾಂತ್ಯದವರೆಗೆ ಅಥವಾ ಬೋಧನೆಯುದ್ದಕ್ಕೂ ವಿದ್ಯಾರ್ಥಿಯ ಕಲಿವಿನ ಸಾಫಲ್ಯವನ್ನು ನಿರಂತರವಾಗಿ ತಿಳಿಯಲು ನಡೆಸುವ ಮೌಲ್ಯಮಾಪನವೇ ರೂಪಣಾವಧಿಯ ಮೌಲ್ಯಮಾಪನ.

ಶಿಕ್ಷಣಾರ್ಥಿಯ ಕಲಿವಿನಲ್ಲಿ ಆಗಿರುವ ವಿಶೇಷ ದೌರ್ಬಲ್ಯ, ಅದರ ತೀವ್ರತೆ ಹಾಗು ಅದು ಉಂಟಾಗಲು ಕಾರಣ ತಿಳಿದು ಪರಿಹಾರಕಾರ್ಯಕ್ಕೆ ಮಾರ್ಗದರ್ಶನ ನೀಡಲು ಸಲುವಾಗಿ ವ್ಯವಸ್ಥೆಗೊಳಿಸುವ ಮೌಲ್ಯಮಾಪನವೇ ನೈದಾನಿಕ ಮೌಲ್ಯಮಾಪನ.

ಒಂದು ಬೋಧನಾ ಘಟಕ, ಅಧ್ಯಾಯ, ವಿಷಯ ಅಥವಾ ವರ್ಷದ ಅಂತ್ಯದಲ್ಲಿ ಕಲಿಕೆ ಬೋಧನೆ ಮುಗಿದ ಮೇಲೆ ಶಿಕ್ಷಣೋದ್ದೇಶಗಳು ಎಷ್ಟರ ಮಟ್ಟಿಗೆ ಸಫಲವಾಗಿವೆ ಎಂಬುದನ್ನು ತಿಳಿಯಲು ನಡೆಸುವ ಮೌಲ್ಯಮಾಪನವೇ ಸಂಕಲನಾತ್ಮಕ ಮೌಲ್ಯಮಾಪನ.

ಮೌಲ್ಯಮಾಪನ ಒಂದು ನಿರಂತರವಾದ ಕಾರ್ಯ. ಅದು ಸಮಗ್ರವಾಗಿ ನಡೆಯುತ್ತದೆ. ಶಿಕ್ಷಣ ಪ್ರಕ್ರಿಯೆಯಲ್ಲಿ ಬೋಧನೆಯ ಉದ್ದೇಶ, ಪಠ್ಯವಸ್ತು, ಕಲಿವಿನ ಚಟುವಟಿಕೆ ಹಾಗೂ ಮೌಲ್ಯಮಾಪನಗಳು ನಿಕಟವಾಗಿ ಆಂತರಿಕವಾಗಿ ಸಂಬಂಧ ಹೊಂದಿವೆ. ಶಿಕ್ಷಣ ವ್ಯವಸ್ಥೆ ಅರ್ಥಪೂರ್ಣವಾಗಬೇಕಾದರೆ ಈ ನಾಲ್ಕೂ ಅಂಶಗಳು ಪರಸ್ಪರ ಪೂರಕವಾಗಿರಬೇಕು.

ಬೋಧನೆ - ಕಲಿಕೆಯಿಂದ ಶಿಕ್ಷಣಾರ್ಥಿಯಲ್ಲಿ ಯಾವ ವರ್ತನಾ ಬದಲಾವಣೆ ತರಲು ಅಪೇಕ್ಷಿಸಲಾಗಿದೆಯೋ ಅದು ಬೋಧನೆಯ ಉದ್ದೇಶ. ಉದ್ದೇಶ ಸಾಧನೆ

ಅಧ್ಯಯನ ಮಾಡಬೇಕಾದ ವಿಷಯ, ಆಧಾರ ಗ್ರಂಥಗಳ ವಿವರ ಅವಲೋಕಿಸಬೇಕಾದ ಗ್ರಂಥಗಳ ವಿವರಗಳನ್ನೊಳಗೊಂಡ ವಿವರವಾದ ಹೇಳಿಕೆಯೇ ಪಠ್ಯವಸ್ತು. ಶಿಕ್ಷಕನ ಮಾರ್ಗದರ್ಶನದಲ್ಲಿ ಪಠ್ಯವಸ್ತುವನ್ನು ಉಪಕ್ರಮಿಸಿ ಬೋಧನೆಯ ಉದ್ದೇಶಗಳನ್ನು ಸಾಕ್ಷಾತ್ಕರಿಸಲು ಶಾಲೆಯ ಒಳಗೆ ಹಾಗೂ ಹೊರಗೆ ಶಿಕ್ಷಣಾರ್ಥಿ ಕೈಗೊಳ್ಳಬೇಕಾದ ಚಟುವಟಿಕೆಗಳೇ ಕಲಿವಿನ ಚಟುವಟಿಕೆ. ಬೋಧನೆಯ ಉದ್ದೇಶಕ್ಕೆ ಸಂಬಂಧಿಸಿದಂತೆ ಕಲಿವಿನ ಚಟುವಟಿಕೆಗಳಿಂದ ಪಠ್ಯವಸ್ತುವನ್ನು ಉಪಕ್ರಮಿಸುವದರ ಮೂಲಕ ಶಿಕ್ಷಣಾರ್ಥಿ ಏನನ್ನು ಮತ್ತು ಎಷ್ಟನ್ನು ಸಾಧಿಸಿದ್ದಾನೆ ಎನ್ನುವದನ್ನು ತಿಳಿಯುವ ಪ್ರಯತ್ನವೇ ಮೌಲ್ಯಮಾಪನ. ಶಿಕ್ಷಣದ ಪ್ರಕ್ರಿಯೆಯ ಮೂಲಾಂಶಗಳೆಂದು ಪರಿಗಣಿಸಲ್ಪಡುವ ಬೋಧನೆಯ ಉದ್ದೇಶ, ಪಠ್ಯವಸ್ತು, ಕಲಿವಿನ ಚಟುವಟಿಕೆ ಹಾಗೂ ಮೌಲ್ಯಮಾಪನಗಳ ನಡುವಿನ ಆಂತರಿಕ ಸಂಬಂಧ ಹೊಂದಿದೆ.

ಮೌಲ್ಯಮಾಪನ ಬೋಧನೆಯ ಉದ್ದೇಶದೊಡನೆ ನೇರ ಸಂಬಂಧ ಹೊಂದಿದೆ. ಅದು ಕಲಿವಿನ ಚಟುವಟಿಕೆ ಹಾಗೂ ಪಠ್ಯವಸ್ತುಗಳೊಡನೆ ಪರೋಕ್ಷ ಸಂಬಂಧ ಹೊಂದಿದೆ. ಕಲಿವಿನ ಚಟುವಟಿಕೆ ಪಠ್ಯವಸ್ತುವಿನೊಡನೆ ನೇರ ಸಂಬಂಧ ಹೊಂದಿದೆ. ಅದು ಬೋಧನೆಯ ಉದ್ದೇಶ ಹಾಗೂ ಮೌಲ್ಯಮಾಪನಗಳೊಡನೆ ಪರೋಕ್ಷ ಸಂಬಂಧ ಹೊಂದಿದೆ. ಕಲಿಕೆ ಬೋಧನೆಗೆ ನಿರ್ದಿಷ್ಟ ಉದ್ದೇಶ ಇರುತ್ತದೆ. ಪಠ್ಯವಸ್ತು, ಉದ್ದೇಶ ಸಾಧನೆಗೆ ಮಾರ್ಗದರ್ಶನ ಮಾಡುತ್ತದೆ. ಪಠ್ಯವಸ್ತುವಿನ ಆಧಾರದ ಮೇಲೆ ಉದ್ದೇಶ ಸಾಧನೆಗೆ ಕಲಿವಿನ ಚಟುವಟಿಕೆ ನಡೆಯುತ್ತದೆ. ಉದ್ದೇಶದ ಸಾಫಲ್ಯವನ್ನು ಮೌಲ್ಯಮಾಪನ ನಿಷ್ಕರ್ಷಿಸುತ್ತದೆ. ಉದ್ದೇಶ ಸಾಧನೆಯಾದರೆ ಮುಂದಿನ ಉದ್ದೇಶವನ್ನು ಕೈಗೆತ್ತಿಕೊಳ್ಳಲಾಗುತ್ತದೆ. ಸಾಧನೆಯಾಗದಿದ್ದರೆ ಅದೇ ಉದ್ದೇಶವನ್ನು ಪುನರ್ ಸೂತ್ರೀಕರಿಸಿ ಪ್ರಯತ್ನಿಸಲಾಗುತ್ತದೆ. ಮುಂದಿನ ಹಂತಗಳು ಕ್ರಮವಾಗಿ ಉಪಕ್ರಮಿಸಲ್ಪಡುತ್ತದೆ. ಇದೊಂದು ನಿರಂತರ ಚಟುವಟಿಕೆಯಾಗಿದ್ದು ಅಂತ್ಯವಿಲ್ಲದ ವೃತ್ತದೋಪಾದಿಯಲ್ಲಿರುತ್ತದೆ.

ಶಿಕ್ಷಣದ ಮೌಲ್ಯಮಾಪನದಲ್ಲಿ ಉದ್ದೇಶ ಹಾಗೂ ಸನ್ನಿವೇಶಗಳಿಗೆ ಯುಕ್ತವಾದ ತಂತ್ರ ಹಾಗೂ ಸಾಧನಗಳನ್ನು ಬಳಸುವದು ಅತೀವ ಮಹತ್ವದ ವಿಚಾರ.

ಮೌಲ್ಯಮಾಪನ ಕಾರ್ಯದಲ್ಲಿ ಮಕ್ಕಳ ಕಲಿವಿನ ಫಲ ಅಳತೆ ಮಾಡಿ, ಮೌಲಿಕ ತೀರ್ಮಾನ ಕೈಕೊಳ್ಳಲು ಅನುಸರಿಸುವ ಉಪಾಯ ಅಥವಾ ಯುಕ್ತಿಯೇ ಮೌಲ್ಯಮಾಪನದ ತಂತ್ರ. ಶಿಕ್ಷಣ ಮೌಲ್ಯಮಾಪನದಲ್ಲಿ ಸಾಮಾನ್ಯವಾಗಿ ಪರೀಕ್ಷೆ, ವೀಕ್ಷಣೆ, ಸಮೀಕ್ಷೆ, ಸಂದರ್ಶನ, ಪ್ರಶ್ನಾವಳಿ, ವ್ಯಕ್ತಿ ಅಧ್ಯಯನ ಮೊದಲಾದ ತಂತ್ರಗಳನ್ನು ಬಳಸಲಾಗುತ್ತದೆ.

ಮೌಲ್ಯಮಾಪನದ ಯಾವುದೇ ತಂತ್ರದಲ್ಲಿ ಬಳಸುವ ಉಪಕರಣಗಳನ್ನು ಮೌಲ್ಯಮಾಪನದ ಸಾಧನಗಳೆನ್ನುತ್ತಾರೆ. ಪ್ರಬಂಧ ಪ್ರಶ್ನೆ, ಚಿಕ್ಕ ಉತ್ತರ ಪ್ರಶ್ನೆ, ವಸ್ತುನಿಷ್ಠ ಪ್ರಶ್ನೆ. ದರ್ಜಾಮಾಪನ, ತಾಳೆಪಟ್ಟಿ, ತಪಶೀಲು ಪಟ್ಟಿ ಮೊದಲಾದ ಸಾಧನಗಳನ್ನು ಶಿಕ್ಷಣದ ಮೌಲ್ಯಮಾಪನದಲ್ಲಿ ಸಾಮಾನ್ಯವಾಗಿ ಬಳಸಲಾಗುತ್ತದೆ.

ಪ್ರತಿ ತಂತ್ರದಲ್ಲಿ ನಿರ್ದಿಷ್ಟವಾದ ಸಾಧನಗಳನ್ನು ಬಳಸಲಾಗುತ್ತದೆ. ಪರೀಕ್ಷೆ ಎಂಬ ತಂತ್ರದಲ್ಲಿ ಪ್ರಬಂಧ ಪ್ರಶ್ನೆ, ಚಿಕ್ಕ ಉತ್ತರ ಪ್ರಶ್ನೆ, ವಸ್ತುನಿಷ್ಠ ಪ್ರಶ್ನೆ ಎಂಬ ಸಾಧನಗಳನ್ನು ಬಳಸಲಾಗುತ್ತದೆ. ವೀಕ್ಷಣೆ ಎಂಬ ತಂತ್ರದಲ್ಲಿ ತಾಳೆಪಟ್ಟಿ, ದರ್ಜಾಮಾಪನ ಮೊದಲಾದ ಸಾಧನಗಳನ್ನು ಬಳಸಲಾಗುತ್ತದೆ.

**ಭಾರತದ ಪ್ರಚಲಿತ ಶೈಕ್ಷಣಿಕ ಮೌಲ್ಯಮಾಪನ :**

ವರ್ತಮಾನದಲ್ಲಿ ಭಾರತದಲ್ಲಿ ಕೆಲವು ವಿಶೇಷ ಸಂದರ್ಭಗಳನ್ನು ಹೊರತುಪಡಿಸಿ ಶೈಕ್ಷಣಿಕ ಮೌಲ್ಯಮಾಪನಕ್ಕೆ ಪರೀಕ್ಷೆ ಎಂಬ ತಂತ್ರ ಬಳಸಲಾಗುತ್ತದೆ. ಪರೀಕ್ಷೆಯಲ್ಲಿ ಪರೀಕ್ಷೆ ನಡೆಸುವ ವಿಧಾನದ ತಳಹದಿಯ ಮೇಲೆ, ಮೌಖಿಕ ಪರೀಕ್ಷೆ, ಲಿಖಿತ ಪರೀಕ್ಷೆ ಹಾಗೂ ಕಾರ್ಯ ಪರೀಕ್ಷೆಗಳೆಂಬ ಮೂರು ಪ್ರಕಾರಗಳನ್ನು ಕಾಣಬಹುದು.

ಪೂರ್ವ ನಿಯೋಜಿತ ಕ್ರಮದಲ್ಲಿಯೇ ಆಗಲಿ ಸ್ವಾಭಾವಿಕವಾಗಿಯೇ ಆಗಲಿ ವಿದ್ಯಾರ್ಥಿಯನ್ನು ಬಾಯಿಮಾತಿನಲ್ಲಿ ಪ್ರಶ್ನಿಸಿ ಅವನು ಬಾಯಿ ಮಾತಿನಲ್ಲಿ ನೀಡುವ ಉತ್ತರವನ್ನು ಆದರಿಸಿ ಮೌಲ್ಯ ನಿಷ್ಕರ್ಷಿಸುವ ಪರೀಕ್ಷೆ ಮೌಖಿಕ ಪರೀಕ್ಷೆ. ಇದು ಶಿಕ್ಷಣದ ಪ್ರಾಚೀನ ಮೌಲ್ಯಮಾಪನ ತಂತ್ರವಾಗಿದ್ದು ಮಕ್ಕಳ ನೈಜ ಸಾಮರ್ಥ್ಯ ಅಳೆಯಲು ಉತ್ತಮ ತಂತ್ರವಾಗಿದೆ. ಇದರಿಂದ ಮಕ್ಕಳ ಓದು, ಉಚ್ಚರಣೆ, ಭಾಷಾ ಸಾಮರ್ಥ್ಯ, ವಿಷಯದ ಅಭಿವ್ಯಕ್ತಿ, ಸ್ಮೃತಿ ಮುಂತಾದವುಗಳನ್ನು ಮೌಲ್ಯಮಾಪನ ಮಾಡಬಹುದು. ಆದರೆ ಇದರ ವಿಶ್ವಾಸ ನೀಯತೆ ಕಡಿಮೆ ಮಾತ್ರವಲ್ಲ ವ್ಯಕ್ತಿನಿಷ್ಠ ವಾಗುವ ಸಂಭವ ಇರುತ್ತದೆ. ಬರವಣಿಗೆಯ ಸಾಮರ್ಥ್ಯ ಅಳೆಯುವದು ಅಸಾಧ್ಯ ಮಾತ್ರವಲ್ಲ ಮಕ್ಕಳ ಭಯ, ಮಾನಸಿಕ ಒತ್ತಡ ಹಾಗೂ ಉದ್ವೇಗಕ್ಕೊಳಗಾಗುವ ಸಾಧ್ಯತೆಯಿದೆ. ಲಿಖಿತ ದಾಖಲೆ ಇಲ್ಲದೇ ದುರುಪಯೋಗಕ್ಕೊಳಗಾಗಬಹುದು. ಪ್ರಸ್ತುತ ಶಿಕ್ಷಣದ ಪ್ರಾಥಮಿಕ ಹಂತದಲ್ಲಿ ಹಾಗೂ ಸ್ನಾತಕೋತ್ತರ ಹಂತದಲ್ಲಿ ಭಾಷಾ ವಿಷಯಗಳ ಮೌಲ್ಯಮಾಪನದಲ್ಲಿ ಈ ತಂತ್ರ ಬಳಸಲ್ಪಡುತ್ತದೆ.

ಪ್ರಶ್ನೆ ಉತ್ತರಗಳೆರಡೂ ಲಿಖಿತರೂಪದಲ್ಲಿರುವ ಮೌಲ್ಯಮಾಪನದ ತಂತ್ರವೇ ಲಿಖಿತ ಪರೀಕ್ಷೆ. ಇದು ಸಾಂಪ್ರದಾಯಿಕ ಪರೀಕ್ಷೆಗಳಲ್ಲಿ ಜನಪ್ರಿಯ ತಂತ್ರವಾಗಿದೆ. "ಮಕ್ಕಳಿಗೆ ವಿವಿಧ ಪ್ರಕಾರದ ಪ್ರಶ್ನೆಗಳನ್ನೊಳಗೊಂಡ ಲಿಖಿತ ಪ್ರಶ್ನೆ ಪತ್ರಿಕೆ ನೀಡಿ

ನಿಗದಿತ ಸಮಯದಲ್ಲಿ ವಿದ್ಯಾರ್ಥಿಗಳಿಂದ ಅವುಗಳಿಗೆ ಲಿಖಿತ ರೂಪದಲ್ಲಿ ಪಡೆದ ಉತ್ತರವನ್ನಾಧರಿಸಿ ಈ ತಂತ್ರದಲ್ಲಿ ಮೌಲ್ಯ ನಿಷ್ಕರ್ಷಿಸಲಾಗುತ್ತದೆ" ಈ ತಂತ್ರದಿಂದ ಏಕ-ಕಾಲಕ್ಕೆ ಅನೇಕ ವಿದ್ಯಾರ್ಥಿಗಳ ಮೌಲ್ಯಮಾಪನ ಮಾಡಬಹುದು ಮಾತ್ರವಲ್ಲ ವಿದ್ಯಾರ್ಥಿಗಳ ವಿವರಣೆ, ಬರವಣಿಗೆ, ಭಾಷಾಶೈಲಿ, ವಿಮರ್ಶಾ ಸಾಮರ್ಥ್ಯಗಳನ್ನು ಯಶಸ್ವಿಯಾಗಿ ಮಾಡಬಹುದು.ಲಿಖಿತ ದಾಖಲೆ ಇರುವದರಿಂದ ಹೆಚ್ಚು ವಿಶ್ವಾಸಾರ್ಹ ಹಾಗೂ ವಸ್ತುನಿಷ್ಠ, ಪರೀಕ್ಷಾ ಕಾಲದಲ್ಲಿ ಮಕ್ಕಳಿಗೆ ಮಾನಸಿಕ ಒತ್ತಡಕ್ಕೊಳಗಾಗುವ ಸಮಸ್ಯೆ ಇಲ್ಲ. ಆದರೆ ಈ ಪರೀಕ್ಷೆಯಲ್ಲಿ ಮಕ್ಕಳ ಓದುವ, ಉಚ್ಚರಣೆ, ಅಭಿವ್ಯಕ್ತಿ, ಕೌಶಲ-ಗಳನ್ನು ಅಳೆಯುವದು ಅಸಾಧ್ಯ. ನಕಲು ಮಾಡುವ ಸಾಧ್ಯತೆ ಇರುವದಲ್ಲದೆ ಪರೀಕ್ಷಾಕಾಲದಲ್ಲಿ ಮಕ್ಕಳ ಅಸೌಖ್ಯ ಮೊದಲಾದ ತೊಂದರೆಗಳನ್ನು ಇಲ್ಲಿ ಪರಿಗಣಿಸಲಾಗುವದಿಲ್ಲ.

ಭಾಷಾ ಮಾಧ್ಯಮ ಬಳಸದೆ, ವ್ಯಕ್ತಿಯ ಮಾನಸಿಕ ಕ್ರಿಯೆಯಿಂದ ಪ್ರೇರಿತವಾದ ಅಂಗಾಂಗ ಚಲನೆಯಿಂದ ಕೂಡಿದ ಕಾರ್ಯ ಚಟುವಟಿಕೆಗಳನ್ನು ವೀಕ್ಷಿಸಿ ಮನೋಜನ್ಯ ಚಲನೆಗೆ ಸಂಬಂಧಿಸಿದ ಕೌಶಲಗಳ ಮೌಲ್ಯ ನಿರ್ಧರಿಸುವ ಪರೀಕ್ಷೆಯೇ ಕಾರ್ಯಪರೀಕ್ಷೆ. ಆಟ ಆಡುವದು, ಚಿತ್ರಬಿಡಿಸುವದು,ಪ್ರಯೋಗ ಶಾಲೆಯ ಕಾರ್ಯ ಸಾ. ಉ. ಉ. ಕಾ ಚಟುವಟಿಕೆ ಮೊದಲಾದ ನಿರ್ದಿಷ್ಟ ಕಾರ್ಯಮಾಡುವಂತೆ ಮಾಡಿ ಶಿಕ್ಷಣಾರ್ಥಿಯ ಕಾರ್ಯನಿರ್ವಹಣಾ ಸಾಮರ್ಥ್ಯವನ್ನು ಇಲ್ಲಿ ಅಳೆಯಲಾಗುತ್ತದೆ. ಇತರ ತಂತ್ರಗಳಿಂದ ಅಳೆಯಲು ಸಾಧ್ಯವಾಗದ ಮನೋಜನ್ಯ ಚಲನೆಯ ವಲಯದ ಮೌಲ್ಯಮಾಪನವನ್ನು ಈ ಪರೀಕ್ಷೆಯಿಂದ ಮಾಡಬಹುದು. ಆದರೆ ಈ ತಂತ್ರದಿಂದ ಜ್ಞಾನ ಹಾಗೂ ಮನೋಭಾವ ವಲಯದ ಮೌಲ್ಯಮಾಪನ ಅಸಾಧ್ಯ ಮಾತ್ರವಲ್ಲ ಹಣ, ಸಮಯ ಹೆಚ್ಚುಬೇಕಲ್ಲದೇ ಪರೀಕ್ಷಕನಿಗೆ ವಿಶೇಷ ಪರಿಣತಿ ಬೇಕು. ಪ್ರಸ್ತುತ ಭಾರತೀಯ ಶಿಕ್ಷಣದಲ್ಲಿ ಕಾರ್ಯ ಪರೀಕ್ಷೆಗಳನ್ನು ವಿಜ್ಞಾನ ಹಾಗೂ ತಂತ್ರಜ್ಞಾನ ಕ್ಷೇತ್ರದ ಶಿಕ್ಷಣದಲ್ಲಷ್ಟೆ ಬಳಸಲಾಗುತ್ತದೆ.

ಮೂರು ವಿಧದ ಪರೀಕ್ಷೆಗಳು ಲಭ್ಯವಿದ್ದರೂ ಪ್ರಸ್ತುತ ಭಾರತೀಯ ಶಿಕ್ಷಣದಲ್ಲಿ ಕೆಲವೇ ವಿಷಯ ಕ್ಷೇತ್ರಗಳನ್ನು ಹೊರತುಪಡಿಸಿದರೆ ಬಹುತೇಕ ಸಂದರ್ಭಗಳಲ್ಲಿ ಮೌಲ್ಯಮಾಪನದಲ್ಲಿ ಲಿಖಿತ ಪರೀಕ್ಷೆಗಳೇ ಬಳಸಲ್ಪಡುತ್ತವೆ.

ಲಿಖಿತ ಪರೀಕ್ಷೆಗಳಲ್ಲಾದರೂ ಪ್ರಮಾಣೀಕರಿಸಿದ ಪರೀಕ್ಷೆಗಳು ಹಾಗೂ ಶಿಕ್ಷಕ ನಿರ್ಮಿಸಿದ ಪರೀಕ್ಷೆಗಳೆಂಬ ಎರಡು ಪ್ರಕಾರಗಳನ್ನು ಕಾಣಬಹುದಾಗಿದೆ. ಪರೀಕ್ಷೆಯ ರಚನೆ ಹೇಗಾಗುತ್ತದೆ ಎನ್ನುವದನ್ನು ಇಲ್ಲಿ ಆದಾರವಾಗಿ ತೆಗೆದುಕೊಳ್ಳಲಾಗುತ್ತದೆ.

ಪ್ರಮಾಣೀಕರಿಸಿದ ಪರೀಕ್ಷೆಯಲ್ಲಿ ಪರೀಕ್ಷೆ ವಿಷಯವನ್ನು ಜಾಗರೂಕತೆ ಆಯ್ಕೆ ಮಾಡಲಾಗುತ್ತಿದ್ದು ಅದು ಅನುಭವಾತ್ಮಕವಾಗಿ ಪರಿಶೀಲಿಸಲ್ಪಡು ಅದಕ್ಕೆ ಪ್ರಮಾಣಗಳನ್ನು ಸಿದ್ಧಪಡಿಸಲಾಗುತ್ತದೆ. ಮಾತ್ರವಲ್ಲ ಈ ಪರೀಕ್ಷೆ ನಡ ಹಾಗೂ ಅಂಕ ನೀಡುವ ಕುರಿತು ಏಕರೂಪದ ನಿಯಮ ರೂಪಿಸಲ್ಪಟ್ಟು ಇದು ಅ ಹೆಚ್ಚು ವಸ್ತುನಿಷ್ಠವಾಗಿರುತ್ತದೆ ಎಂದು ಗುಡ್‌ಕ್ವಾರ್ಟರ್ ಅಭಿಪ್ರಾಯ ಪಡು ಇದು ವಿಶಾಲ ವ್ಯಾಪ್ತಿ ಹೊಂದಿದ್ದು ತಜ್ಞರ ಸಮೂಹ ಇದನ್ನು ರೂಪಿಸ ವಿಶೇಷ ರೀತಿಯ ಪ್ರಮಾಣಗಳನ್ನು ಹೊಂದಿದ್ದು ಲೌಕಿಕವಾಗಿ ಹೆಚ್ಚು ಸಮ ವಿಶ್ವಾಸಾರ್ಹ ಹಾಗೂ ವಸ್ತುನಿಷ್ಠವಾಗಿರುತ್ತದೆ. ಪರೀಕ್ಷೆ ನಡೆಸುವ ಅಂಕ ನ ಕುರಿತು ಮಾರ್ಗದರ್ಶನ ಮಾಡುವ ಕೈಪಿಡಿ ಹೊಂದಿರುತ್ತದೆ. ಆದರೆ ಏಕರೂ ವಿಶೇಷ ಮಹತ್ವ ಕೊಡಲಾಗಿದ್ದು ವ್ಯಕ್ತಿ,ತರಗತಿ, ಪ್ರಾದೇಶೀಕ ವ್ಯತ್ಯಾಸ ಅಲಕ್ಷಿಸಲ್ಪ ತ್ತದೆ. ರಚನೆ ಸುದೀರ್ಘ ವಿಧಾನವಾಗಿದ್ದು ತಜ್ಞರು ಹಾಗೂ ಪರಿಣಿತರ ಅಗ ಮಾತ್ರವಲ್ಲ ವೆಚ್ಚದಾಯಕವಾಗಿದೆ.

ಶಿಕ್ಷಕ ತಾನು ಬೋಧಿಸಿದ ವಿಷಯದ ಮೇಲೆ ತಾನೇ ರೂಪಿಸಿದ ಪ್ರಶ್ನೆಗ ಬಳಸಿ ವಿದ್ಯಾರ್ಥಿಗಳ ಮೌಲ್ಯ ನಿಷ್ಕರ್ಷಿಸುವ ಪರೀಕ್ಷೆಯೇ ಶಿಕ್ಷಕ ನಿರ್ಮಿತ ಪ ಯಾಗಿದೆ. ಇಲ್ಲಿ ಅಧ್ಯಾಪಕನಿಗೆ ಹೆಚ್ಚಿನ ಸ್ವಾತಂತ್ರ್ಯವಿದೆ ಮಾತ್ರವಲ್ಲ ಈ ಕಡಿಮೆ ವೆಚ್ಚ ಕಡಿಮೆ ಶ್ರಮ ಹಾಗೂ ಕಡಿಮೆ ಸಮಯದ್ದಾಗಿದೆ. ಆದ ಕಡಿಮೆ ವ್ಯಾಪ್ತಿಯದಾಗಿದ್ದು ಇದರ ವಿಶ್ವಾಸಾರ್ಹತೆ, ಸಮಂಜಸತೆ, ವಸ್ತು ಪ್ರಶ್ನಾರ್ಹವಾಗಿದೆ. ನೀಲನಕ್ಷೆಗಾಗಲಿ, ಪ್ರಮಾಣಕ್ಕಾಗಲಿ ವಿಶೇಷ ಮಹತ್ವ ಕೊ ಅವಸರದಲ್ಲಿ ರಚಿಸಲ್ಪಡುವ ಸಾಧ್ಯತೆ ಹೆಚ್ಚಿರುತ್ತದೆ.

ಪ್ರಚಲಿತ ಭಾರತೀಯ ಶಿಕ್ಷಣದಲ್ಲಿ ಹಲವಾರು ಪ್ರಮಾಣೀಕರಿಸಿದ ಪರೀಕ್ಷೆ ರಚಿಸಲ್ಪಟ್ಟಿದ್ದರೂ ಅವುಗಳ ಬಳಕೆ ತೀರಾ ಅಪರೂಪ. ಶಿಕ್ಷಕ ನಿರ್ಮಿತ ಪರೀಕ್ಷೆ ಸಾಮಾನ್ಯ ಹಾಗೂ ಜನಪ್ರಿಯವಾಗಿದೆ.

ಪರೀಕ್ಷೆ ಪ್ರಮಾಣೀಕರಿಸಿದ್ದೆ ಆಗಿರಲಿ ಅಥವಾ ಶಿಕ್ಷಕ ನಿರ್ಮಿತವಾದದ್ದೇ ಆ ಅದರ ಉದ್ದೇಶವನ್ನು ಪರಿಗಣಿಸಿದಾಗ ಅದರಲ್ಲಿ ಸಾಧನ ಪರೀಕ್ಷೆ ಹಾಗೂ ನೈದ ಪರೀಕ್ಷೆಗಳೆಂಬ ಎರಡು ಪ್ರಕಾರಗಳಿವೆ. ಇದಲ್ಲದೇ ಈ ಎರಡೂ ಉದ್ದೇ ನ್ನೊಳಗೊಂಡ ಘಟಕ ಪರೀಕ್ಷೆಗಳು ಅಸ್ತಿತ್ವದಲ್ಲಿದೆ.

ವಿದ್ಯಾರ್ಥಿ ಏನನ್ನು ಮತ್ತು ಎಷ್ಟನ್ನು ಕಲಿತಿದ್ದಾನೆ ಮತ್ತು ಒಂದು ಚಟುವ ಯನ್ನು ಎಷ್ಟು ಪರಿಣಿತಿಯಿಂದ ನಿರ್ವಹಿಸುತ್ತಾನೆ ಎಂಬುದನ್ನು ಅಳೆ ಪರೀಕ್ಷೆಯೇ ಸಾಧನಾ ಪರೀಕ್ಷೆ.

ಕಲಿಕೆಯ ವಿಶೇಷ ದೌರ್ಬಲ್ಯ ಅಥವಾ ನ್ಯೂನತೆಯ ಮಾದರಿಯನ್ನು ಗುರುತಿಸು-ವಲ್ಲಿ ಸಹಾಯಕವಾಗುವ ಪರೀಕ್ಷೆಯೇ ನೈಧಾನಿಕ ಪರೀಕ್ಷೆ.

ನಿರ್ದಿಷ್ಟ ಘಟಕಕ್ಕೆ ಸಂಬಂಧಿಸಿದಂತೆ ಆ ಘಟಕದ ಬೋಧನೆಯ ಉದ್ದೇಶಗಳನ್ನು ಹೊಂದುವಲ್ಲಿ ವಿದ್ಯಾರ್ಥಿಗಳ ಸಾಧನೆಯನ್ನೂ, ಆ ಘಟಕದ ಕಲಿಕೆಯಲ್ಲಿ ವಿದ್ಯಾರ್ಥಿಗಳಲ್ಲಿ ಕಂಡುಬರುವ ವಿಶೇಷ ದೌರ್ಬಲ್ಯಗಳನ್ನು ನಿರ್ಧರಿಸಲು ಬಳಸುವ ಪರೀಕ್ಷೆಯೇ ಘಟಕ ಪರೀಕ್ಷೆ.

ಪ್ರಸ್ತುತ ಭಾರತೀಯ ಶಿಕ್ಷಣದಲ್ಲಿ ಮೌಲ್ಯಮಾಪನಕ್ಕೆ ಸಾಧನ ಪರೀಕ್ಷೆಗಳನ್ನೇ ಹೆಚ್ಚಾಗಿ ಬಳಸಲಾಗುತ್ತಿದ್ದು ನೈಧಾನಿಕ ಪರೀಕ್ಷೆ ಹಾಗೂ ಘಟಕ ಪರೀಕ್ಷೆಗಳ ಬಳಕೆ ಅಪರೂಪವಾಗಿದೆ.

ಒಟ್ಟಿನಲ್ಲಿ ಕೆಲವು ವಿಶೇಷ ಸಂದರ್ಭಗಳನ್ನು ಹೊರತುಪಡಿಸಿದರೆ ಭಾರತೀಯ ಪ್ರಚಲಿತ ಶಿಕ್ಷಣ ವ್ಯವಸ್ಥೆಯಲ್ಲಿ ಮೌಲ್ಯಮಾಪನಕ್ಕೆ ಶಿಕ್ಷಕ ನಿರ್ಮಿತ ಲಿಖಿತ ಸಾಧನ ಪರೀಕ್ಷೆಗಳನ್ನು ಬಳಸಲಾಗುತ್ತದೆ. ಇದು ಭಾರತೀಯ ಶಿಕ್ಷಣದ ಮೌಲ್ಯಮಾಪನ ಕಾರ್ಯದಲ್ಲಿ ಹಲವು ದೌರ್ಬಲ್ಯಗಳುಂಟಾಗಲು ಕಾರಣವಾಗಿದೆ.

ತಾತ್ವಿಕವಾಗಿ ಒಂದು ಪರೀಕ್ಷೆಗೆ ಒಂದೇ ಗುರಿ ಇರಬೇಕು. ಆದರೆ ಭಾರತೀಯ ಶಿಕ್ಷಣದ ಮೌಲ್ಯಮಾಪನದಲ್ಲಿ ಒಂದೇ ಪರೀಕ್ಷೆ ಮಕ್ಕಳ ಸಾಧನೆ ಅಳೆಯುವ, ಮುಂದಿನ ವರ್ಗಕ್ಕೆ ಹೋಗುವ ಅರ್ಹತೆ ತಿಳಿಯುವ, ಶಿಷ್ಯವೇತನ ಪಡೆಯುವ ಅರ್ಹತೆ ತಿಳಿಯುವ ಮೊದಲಾದ ಹತ್ತಾರು ಗುರಿಗಳನ್ನು ಹೊಂದುವದು ಸರಿಯಲ್ಲ.

ಮೌಲ್ಯಮಾಪನ ಶಿಕ್ಷಣದ ಗುರಿಯೊಡನೆ ಸಂಬಂಧ ಹೊಂದಿರಬೇಕು. ಶಿಕ್ಷಣಾರ್ಥಿಯ ವ್ಯಕ್ತಿತ್ವದ ಸರ್ವಾಂಗೀಣ ವಿಕಾಸಕ್ಕೆ ಅವಕಾಶ ಕಲ್ಪಿಸುವದು ನಮ್ಮ ಶಿಕ್ಷಣದ ಗುರಿ. ಅಂದಾಗ ನಮ್ಮ ಮೌಲ್ಯಮಾಪನ ವಿದ್ಯಾರ್ಥಿಯ ವ್ಯಕ್ತಿತ್ವದ ಜ್ಞಾನ ವಲಯ, ಮನೋಭಾವ ವಲಯ, ಮನೋಜನ್ಯ ಚಲನೆಯ (ಕೌಶಲ) ವಲಯ ಕ್ಷೇತ್ರಗಳ ಮೌಲ್ಯ ನಿಷ್ಕರ್ಷಿಸಬೇಕು. ಆದರೆ ಶಿಕ್ಷಕ ನಿರ್ಮಿತ ಲಿಖಿತ ಪರೀಕ್ಷೆಗಳಿಂದ ನಡೆಯುವ ನಮ್ಮ ಮೌಲ್ಯಮಾಪನ ಜ್ಞಾನವಲಯ. ಅದರಲ್ಲೂ ಸ್ಮೃತಿಯನ್ನು ಮಾತ್ರ ಮೌಲ್ಯಮಾಪನ ಮಾಡುತ್ತಿದ್ದು ವ್ಯಕ್ತಿತ್ವದ ಇತರ ಎರಡು ವಲಯಗಳನ್ನು ಅಲಕ್ಷಿಸಲ್ಪಡುತ್ತದೆ. ಮನೋಭಾವ ಹಾಗೂ ಕೌಶಲ ವಲಯಗಳನ್ನು ಯುಕ್ತವಾದ ತಂತ್ರಗಳಿಂದ ಅಳೆಯುವ ಕಾರ್ಯ ನಡೆಯುವದಿಲ್ಲ.

ಶಿಕ್ಷಕ ನಿರ್ಮಿತ ಲಿಖಿತ ಪರೀಕ್ಷೆಗಳ ಸಮಂಜಸತೆ, ವಿಶ್ವಾಸಾರ್ಹತೆ, ವಸ್ತುನಿಷ್ಠತೆ, ವಿಭೇದಕ ಶಕ್ತಿ, ಕ್ಲೇಶತೆಯ ಮಟ್ಟ ಸಮತೂಗಿಸುವಿಕೆ, ವ್ಯಾಪತೆ ಮೊದಲಾದ ಲಕ್ಷಣಗಳು ಪ್ರಶ್ನಾರ್ಹವಾಗಿರುವದರಿಂದ ಇದು ಮನೋವೈಜ್ಞಾನಿಕವಲ್ಲ.

ಪರೀಕ್ಷೆ ಶಿಕ್ಷಣದ ಗುರಿಯ ಸಾಕ್ಷಾತ್ಕಾರಕ್ಕೆ ಒಂದು ಮಾಧ್ಯಮವೇ ವಿನಃ ಅದೇ ಅಂತ್ಯವಲ್ಲ. ಭಾರತೀಯ ಶಿಕ್ಷಣದ ಮೌಲ್ಯಮಾಪನದಲ್ಲಿ ಪರೀಕ್ಷೆಗೆ ಎಲ್ಲಿಲ್ಲದ ಮಹತ್ವ ಒಂದು ಪರೀಕ್ಷೆಯೇ ಅಂತಿಮ ಗುರಿಯಾಗಿ ಇಡೀ ಶಿಕ್ಷಣ ವ್ಯವಸ್ಥೆ ಪರೀಕ್ಷಾ ಕೇಂದ್ರಿತವಾಗಿದೆ.

ಪರೀಕ್ಷೆಗೆ ಎಲ್ಲಿಲ್ಲದ ಮಹತ್ವ ಬಂದು ಅದೇ ವಿದ್ಯಾರ್ಥಿಗೆ ಮಾನದಂಡವಾಗಿ ರುವದರಿಂದ ಈ ಪರೀಕ್ಷೆಗಳಲ್ಲಿ ಅಕ್ರಮ, ಅನೀತಿಗಳು ತುಂಬಿಹೋಗಿ ಆಡಳಿತಗಾರರಿಗೆ ಇಂಥ ಪರೀಕ್ಷೆ ನಡೆಸುವದೇ ಕಷ್ಟಸಾಧ್ಯವಾಗುತ್ತಿದೆ.

ಭಾರತೀಯ ಮೌಲ್ಯಮಾಪನ ವ್ಯವಸ್ಥೆ ವಿದ್ಯಾರ್ಥಿಗಳನ್ನು ಸದಾ ಮಾನಸಿಕ ಒತ್ತಡದಲ್ಲಿಡುವದರಿಂದ ಕಲಿಕೆ ಮುಕ್ತ ವಾತಾವರಣದಲ್ಲಿ ನಡೆಯುವದಿಲ್ಲ ಮಾತ್ರವಲ್ಲ ಈ ಪರೀಕ್ಷೆಗಳು ವಿದ್ಯಾರ್ಥಿಗಳ ಆರೋಗ್ಯವನ್ನು ಹಾಳುಮಾಡುತ್ತವೆ.

ಭಾರತೀಯ ಶಿಕ್ಷಣದ ಮೌಲ್ಯಮಾಪನದಲ್ಲಿ ಶಿಕ್ಷಕರು ವಿದ್ಯಾರ್ಥಿಗಳನ್ನು ಪರೀಕ್ಷೆ ಗಾಗಿ ಸಿದ್ಧಗೊಳಿಸುವದರಲ್ಲಿ ನಿರತರಾಗಿ ಕಲಿಕೆ ಬೋಧನೆಯ ವಾಸ್ತವಿಕ ಗುರಿಗಳನ್ನು ಅಲಕ್ಷಿಸುವ ಸಾಧ್ಯತೆಯಿದೆ

ಮೌಲ್ಯಮಾಪನದಲ್ಲಿ ಒಬ್ಬನೇ ವಿದ್ಯಾರ್ಥಿಯ ವ್ಯಕ್ತಿತ್ವ ವಿಕಾಸದ ಬೇರೆ ಬೇರೆ ಹಂತ-ಗಳ ಸಾಧನೆಯನ್ನು ಲೌಕಿಕವಾಗಿ ಅಧ್ಯಯನ ಮಾಡಬೇಕು. ನಮ್ಮ ಪರೀಕ್ಷಾ ವ್ಯವಸ್ಥೆ-ಯಲ್ಲಿನ ವಿವಿಧ ವಿದ್ಯಾರ್ಥಿಗಳ ಸಾಧನೆಯನ್ನು ತುಲನೆ ಮಾಡಿ ಅವರುಗಳಿಗೆ ಸ್ಥಾನಮಾನ ಕೊಡುವದು ಮನೋವೈಜ್ಞಾನಿಕ ಅಲ್ಲ.

ಭಾರತೀಯ ಶಿಕ್ಷಣದ ಮೌಲ್ಯಮಾಪನದ ಶಿಕ್ಷಕ ನಿರ್ಮಿತ ಲಿಖಿತ ಪರೀಕ್ಷೆಗಳು ವಿದ್ಯಾರ್ಥಿಗಳ ಸಾಧನೆಯನ್ನು ಮಾತ್ರ ಅಳೆಯುತ್ತಿದ್ದು ನೈಧಾನಿಕತೆಯನ್ನು ಅರಿತು ಪರಿಹಾರ ಏರ್ಪಡಿಸುವ ಕಾರ್ಯ ದಿವ್ಯವಾದ ಅಲಕ್ಷಕ್ಕೊಳಗಾಗಿದೆ.

ಭಾರತೀಯ ಶಿಕ್ಷಣದ ಮೌಲ್ಯಮಾಪನ ನಿರಂತರವಾಗಿ ನಡೆಯುತ್ತಿಲ್ಲ. ಹೀಗೆ ಶಿಕ್ಷಕ ನಿರ್ಮಿತ ಲಿಖಿತ ಸಾಧನ ಪರೀಕ್ಷೆಗಳಿಂದ ನಡೆಯುವ ನಮ್ಮ ಮೌಲ್ಯಮಾಪನ ಶಿಕ್ಷಕರು, ಪಾಲಕರು, ಬಾಲಕರು, ಆಡಳಿತಗಾರರು ಹಾಗೂ ಯೋಜಕರಾರೂ ಅಪೇಕ್ಷಿಸದ ಒಂದು ಅನಿವಾರ್ಯವಾದ ಪಿಡುಗಾಗಿದೆ.

ಭಾರತೀಯ ಶಿಕ್ಷಣದ ಮೌಲ್ಯಮಾಪನದ ದೌರ್ಬಲ್ಯಗಳನ್ನು ಹೋಗಲಾಡಿಸಿ ಅದನ್ನು ಸುಧಾರಿಸಲು ರಾಷ್ಟ್ರೀಯ ಶಿಕ್ಷಣ ನೀತಿ 1986 ರಲ್ಲಿ ಈ ಕೆಳಗಿನ ಸಲಹೆ ಮಾಡಲಾಗಿದೆ.

ಶಿಕ್ಷಣದ ಮೌಲ್ಯಮಾಪನ ಮಕ್ಕಳ ವ್ಯಕ್ತಿತ್ವದ ಜ್ಞಾನ, ಮನೋಭಾವ, ಮನೋಜನ್ಯ ಚಲನೆ (ಕೌಶಲ) ಯ ವಲಯಗಳನ್ನು ಒಳಗೊಂಡು ವ್ಯಾಪಕವಾಗಿ ಹಾಗೂ ಸಮಗ್ರವಾಗಿ ನಡೆಯಬೇಕು.

ಮೌಲ್ಯಮಾಪನ ಕಾರ್ಯ ವರ್ಷಾಂತ್ಯದಲ್ಲಿ ಮಾತ್ರ ನಡೆಯದೆ ನಿರಂತರವಾಗಿ ನಡೆಯಬೇಕು.

ಶಿಕ್ಷಕ ನಿರ್ಮಿತ ಲಿಖಿತ ಸಾಧನ ಪರೀಕ್ಷೆಗಳನ್ನಷ್ಟೇ ನಡೆಸದೆ ವ್ಯಾಪಕವಾಗಿ ವ್ಯಕ್ತಿತ್ವದ ವಿವಿಧ ಕ್ಷೇತ್ರಗಳ ಮೌಲ್ಯಮಾಪನ ಮಾಡುವಾಗ ಉದ್ದೇಶ ಸನ್ನಿವೇಶಗಳಿಗೆ ಯುಕ್ತವಾದ ಮೌಲ್ಯಮಾಪನದ ಹಲವು ತಂತ್ರ ಹಾಗೂ ಸಾಧನಗಳನ್ನು ಬಳಸಬೇಕು.

ಶೈಕ್ಷಣಿಕ ಮೌಲ್ಯಮಾಪನಕ್ಕೆ ವ್ಯಾಪಕವಾದ ಯೋಜನೆಯನ್ನು ಪೂರ್ವದಲ್ಲೇ ಸಿದ್ಧಪಡಿಸಿಕೊಳ್ಳಬೇಕು.

ಮೌಲ್ಯಮಾಪನ ಕಲಿಕೆ- ಬೋಧನೆಯ ಅವಿಭಾಜ್ಯ ಅಂಗವಾಗಬೇಕು.

ಮೌಲ್ಯಮಾಪನ ಶಿಕ್ಷಣದ ಗುರಿ ಹಾಗೂ ಉದ್ದೇಶಗಳೊಡನೆ ಸಂಬಂಧ ಹೊಂದಿರಬೇಕು.

ಮೌಲ್ಯಮಾಪನ ವಿದ್ಯಾರ್ಥಿಗಳು, ಬೋಧಕರು, ಆಡಳಿತಗಾರರು ಹಾಗೂ ಯೋಜಕರ ಸಂಘಟಿತ ಪ್ರಯತ್ನವಾಗಬೇಕು.

ಶಿಕ್ಷಣದ ಮೌಲ್ಯಮಾಪನದಲ್ಲಿ ಶಿಕ್ಷಣಾರ್ಥಿಯ ಸಾಧನೆ ಅಳೆಯುವದರೊಡನೆ ನೈಧಾನಿಕತೆಯನ್ನು ಗುರುತಿಸಿ ಈ ನೈಧಾನಿಕತೆಗಳಿಗೆ ಪರಿಹಾರ ಏರ್ಪಡಿಸುವ ಕಾರ್ಯಕ್ಕೆ ಮಹತ್ವ ಕೊಡಬೇಕು.

ಈ ಸಲಹೆಗಳಲ್ಲಿ ಹಲವನ್ನು ಅನುಷ್ಠಾನಕ್ಕೆ ತರುವ ಪ್ರಯತ್ನವನ್ನು ನಮ್ಮ ಶಿಕ್ಷಣ ವ್ಯವಸ್ಥೆ ಮಾಡುತ್ತಿರುವದು ಆಶಾದಾಯಕ ಸಂಗತಿಯಾಗಿದೆ.

**[illegible] ಜಿ. ಎಸ್. ಹೆಗಡೆ**
ಬಿ. ಎಸ್. ಸಿ., ಎಂ. ಎ., ಎಂ. ಎಡ್.
ಉಪನ್ಯಾಸಕರು, ಜ. ವಿ. ಸಂ. ಪ. ಪೂ. ಕಾಲೇಜ
ಕಡತೋಕಾ, ತಾ। ಹೊನ್ನಾವರ (ಉ. ಕ.)

## ಎದ್ದೇಳಿ

ಎದ್ದೇಳಿ, ಎದ್ದೇಳಿ, ಎದ್ದೇಳಿ ॥
ಈ ದೇಶದ ಘನಘನತೆಯು ಮೆರೆಯುವಂತೆ ಮಾಡಿ ।
ನವ ಭಾರತ ನಿರ್ಮಾಣಕೆ ಹೊಸ ಜನ್ಮ ನೀಡಿ ।
ಒಗ್ಗೂಡುವ ಹೊಸ ಮಂತ್ರವ ಈ ದಿನವೇ ಹಾಡಿ ।
ಗುರುತರದ ಹೊಣೆಗಾರಿಕೆ ಜನರೆಲ್ಲರ ಕೂಡಿ ॥

ಹೊಸ ದೇಶದ ಹೊಸ ಭಾಷೆಗೆ ನವ ಪಲ್ಲವಿ ಹಾಡಿ ।
ಮರುಜನ್ಮ ಪಡೆದು ಬರುವಂಥ ಜನಕೆ
ಕೈ ಮುಗಿದು ಬೇಡಿ ಬೇಡಿ ।
ಶತಮಾನ ಕಳೆದು ಹೋಯ್ತೆನ್ನುವ ಭಾವ
ಈ ಜನರಲ್ಲಿ ಮೂಡಿ ಮೂಡಿ ।
ಈ ದೇಶದ ಘನತೆಯು ಮೆರೆವ ಹಾಡ
ನಾವೆಲ್ಲ ಹಾಡುವ ಕೂಡಿ ॥

— ಮೂಡ್ಗೇರಿ ಡಿ. ಎನ್. ನಾಯಕ
(ಕನ್ನಡ ಉಪನ್ಯಾಸಕ)

## ಅಣಬೆಗಳಂತೆ...!

ಹುಟ್ಟಿಕೊಳ್ಳುತ್ತಿವೆ ಜಾತಿ-ಸಂಘ-ಸಂಸ್ಥೆಗಳು ।
ಮೂರು ದಿನಗಳಲ್ಲೇ ಮಾಸಿ ಹೋಗುತ್ತವೆ ।
ಇದ್ದ ವಾತಾವರಣವನ್ನೆಲ್ಲಾ ಕೆಡಿಸಿ ।
ಗುಬ್ಬೆಬ್ಬಿಸಿ ಮಾಯವಾಗುವ ಅಣಬೆಗಳು ॥

— ಮೂಡ್ಗೇರಿ ಡಿ. ಎನ್. ನಾಯಕ

# ಚುಟುಕು

## 1. ವ್ಯತ್ಯಾಸ

ಮೃದುವಾದ ನಾಲಿಗೆಯು ಮೊದಲಿಗೇ ಇದ್ದು
ತಾಳುತ್ತ ಬಾಳುತ್ತ ಹೋಗುವುದು ಬಿದ್ದು
ಒರಟಾದ ಹಲ್ಲುಗಳು ಕೊನೆಯಲ್ಲಿ ಮೂಡಿ
ನಡುವೆಯೇ ಕೈಕೊಟ್ಟು ಹೋಗುವವು ನೋಡಿ

## 2. ಕತ್ತೆಯೇ ವಾಸಿ

ವಿಧಿಯಾಟ ಎಂಬರೋ ಕೈಗೆಟುಕದಾಗ
ದೇವರಾಟ ಎಂಬರೋ ಸಿಕ್ಕಾಗ ಜಾಗ
ವಿಧಿಯಾಟ ದೇವರಾಟ ಅನ್ನುತ್ತ ಮತ್ತೆ
ಮಲಗಿಯೇ ಉಳಿಯುವುದು ಉಂಟೇನು ಕತ್ತೆ ?

## 3. ಸಾವು

ತುಂಬು ಬಾಳನು ಬಾಳಿ ಸತ್ತಿರಲು ನೋಡಿ
ಅಂಥವನ ಕುರಿತಾಗಿ ವ್ಯಥೆಪಡಲು ಬೇಡಿ
ನಾ ಸತ್ತು ಹೊಸಬರಿಗೆ ಅವಕಾಶ ಮಾಡಿ
ಕೊಡುವುದೇ ಆಗಿಹುದು ಈ ಪ್ರಕೃತಿ ರೂಢಿ

## 4. ಕೊಲ್ಲುವವ ಕಾಯುವವ

ಕೊಲ್ಲುವವ ಕಾಯುವವ ಒಬ್ಬನೇ ಪುರುಷ
ಹೀಗಾಗಿ ಆತನಿಗೆ ವಿಪರೀತ ಕೆಲಸ
ಅಲ್ಲಲ್ಲಿ ಬದುಕಿರುವ ಸಜ್ಜನರ ಕೊಂದು
ಆ ಮೇಲೆ ಎಲ್ಲರನು ಕಾಯುವನು ಮುಂದು

## 5. ಮನುಷ್ಯತ್ವ

ಮನುಷ್ಯತ್ವ ಎಂಬುದೇ ದೊಡ್ಡ ಸಂಪತ್ತು
ನೋಡಿ ಇದು ಯಾರಿಗೂ ತರದಯ್ಯ ಕುತ್ತು
ಒಳಕಣ್ಣು ಉಳ್ಳವಗೆ ಈ ಹೊಳೆವ ಮುತ್ತು
ಕಳ್ಳರಿಗೆ ಕಾಣದಿಹ ಅಪೂರ್ವ ಸೊತ್ತು

### 6. ರೈತರ ಓಟು

ರೈತರೇ ನೀವೆಲ್ಲ ಕೊಟ್ಟಿರುವ ಓಟು
ನಿಮ್ಮದೇ ಕೈಗಳಿಗೆ ಕೊಡಿಸಿಹುದು ತಾಟು
ಕಾರಣವು ಅಧಿಕಾರ ಹಿಡಿದವರು ಮತ್ತೆ
ವಿಶ್ವ ವ್ಯಾಪಾರಿಗಳ ಸೇವಕರು ಗೊತ್ತೆ ?

### 7. ನಮಗೆ ನಾವೇ

ಹಣೆಯಲ್ಲಿ ಬರೆದದ್ದು ಅನ್ನುವುದು ಸುಳ್ಳು
ಈಗಲೂ ಹಲವರಿಗೆ ಬಿಟ್ಟಿಲ್ಲ ಮಳ್ಳು
ನಮಗೆ ನಾವೇ ನೋಡು ಬೇರಿಲ್ಲ ಬ್ರಹ್ಮ
ಇದನರಿತು ಸಾಧನೆಗೆ ಅಣಿಯಾಗು ತಮ್ಮ

### 8. ಮುಖಂಡ ಹೇಳಿದ್ದು

ಬೆಚ್ಚದಿರಿ ನೀವಿಂದು ನಾನಿರುವೆ ಹಿಂದೆ
ಕೊಚ್ಚಿರೈ ಕಡಿಯಿರೈ ನೋಡೋಣ ಮುಂದೆ
ನೀವೆಲ್ಲ ಸತ್ತರೂ ಮುರಿದರೂ ಕಾಲು
ಕೊಡಿಸುವೆನು ಪರಿಹಾರದೊಳಗೊಂದು ಪಾಲು

### 9. ಕಳ್ಳಹಣ

ಕಳ್ಳಹಣ ಹೊರಗೆಳೆದು ತಂದಲ್ಲಿ ಇಲ್ಲಿ
ಬೇಡುವುದು ತಪ್ಪೀತು ಪರದೇಶದಲ್ಲಿ
ಈ ಕಳ್ಳ ಸಂಪತ್ತು ಹೊರಗೆಳೆಯ ಬಲ್ಲ
ವ್ಯವಸ್ಥೆ ಬೇಕಿತ್ತು ಕಳ್ಳರೇ ಎಲ್ಲ !

### 10. ಕೇಡಿಗಳ ಕೈಲಿ

ಮೌಢ್ಯತೆಯ ತೊಲಗಿಸುವ ವಿಜ್ಞಾನ ನೋಡಿ
ಆಗಲೇ ಬೇಕಿತ್ತು ಜಗಕೆಲ್ಲ ನಾಡಿ
ನಾಡಿಯಾಗ ಬೇಕಾದ ವಿಜ್ಞಾನ ಮತ್ತೆ
ಕೇಡಿಗಳ ಕ್ರೂರಿಗಳ ಬೊಗಸೆಯೊಳು ಬಿತ್ತೆ ?

— **ಮಧುಸೂದನ ಭಂಡಾರಿ, VIII B**

# ಆಧುನಿಕ ಯುಗದಲ್ಲಿ ಗಣಕಯಂತ್ರದ ಪಾತ್ರ

ಕಂಪ್ಯೂಟರ್ ಆಧುನಿಕ ಜಗತ್ತಿಗೆ ವಿಜ್ಞಾನದ ಒಂದು ಮಹತ್ತರವಾದ ಕೊಡುಗೆ. ಅದು ಕೆಲಸಮಾಡುವ ರೀತಿ ಮತ್ತು ವೇಗವನ್ನು ಗಮನಿಸಿದರೆ ನಿಜಕ್ಕೂ ಆಶ್ಚರ್ಯವಾಗುತ್ತದೆ. ನಾವು ಒಪ್ಪಿಸಿದ ಕೆಲಸವನ್ನು ಅಪೇಕ್ಷೆಗೆ ತಕ್ಕಂತೆ, ಕರಾರುವಕ್ಕಾಗಿ ಅತ್ಯಲ್ಪ ಸಮಯದಲ್ಲಿ ಕಂಪ್ಯೂಟರ್ ಮಾಡಿಕೊಡುತ್ತದೆ. ಕಂಪ್ಯೂಟರಿನ ಇತಿಹಾಸ ಸಾಕಷ್ಟು ಹಳೆಯದಾದರೂ ವಿಶ್ವದ ಮೊದಲ ಕಂಪ್ಯೂಟರ್ ರೂಪುಗೊಂಡಿದ್ದು 1945 ರಲ್ಲಿ. ಈ ಕ್ಷೇತ್ರದಲ್ಲಿ ಸಂಶೋಧನೆ ನಡೆದಂತೆಲ್ಲ ಕಂಪ್ಯೂಟರಿನ ವಿನ್ಯಾಸ, ರಚನೆ, ತಾಂತ್ರಿಕತೆ ಮುಂತಾದವುಗಳಲ್ಲಿ ಬದಲಾವಣೆಗಳು ಆಗುತ್ತ ಬಂದಿವೆ. ಈಗ ಮೆಯಿನ್ ಕಂಪ್ಯೂಟರ್ ಮಿನಿ ಕಂಪ್ಯೂಟರ್, ಮೈಕ್ರೋ ಕಂಪ್ಯೂಟರ್ ಇತ್ಯಾದಿ ಬಗೆ ಬಗೆಯ ಕಂಪ್ಯೂಟರಗಳು ಪ್ರಪಂಚದ ನಾನಾ ಕಡೆ ಕಾರ್ಯನಿರ್ವಹಿಸುತ್ತಿವೆ.

ಕಂಪ್ಯೂಟರ್ ಹೇಗೆ ಕೆಲಸ ಮಾಡುತ್ತದೆ ಎಂದರೆ- ಒಬ್ಬರು ನಮಗೆ ಪ್ರಶ್ನೆ ಕೇಳಿದಾಗ ಆ ಪ್ರಶ್ನೆಯು ಕಿವಿಯ ಮುಖಾಂತರ ಸಾಗಿ ನಮ್ಮ ಮೆದುಳುಗಳನ್ನು ಮುಟ್ಟುತ್ತದೆ. ಮೆದುಳು ತನ್ನಲ್ಲಿ ಸಂಗ್ರಹವಾದ ಅನೇಕ ವಿಷಯಗಳಲ್ಲಿ ಕೇಳಿದ ಪ್ರಶ್ನೆಗೆ ಸರಿಹೊಂದುವ ಉತ್ತರವನ್ನು ಹುಡುಕಿ, ಸಂಸ್ಕರಿಸಿ ಅದನ್ನು ಮಾತಿನ ಅಥವಾ ಬರಹದ ರೂಪದಲ್ಲಿ ವಿತರಿಸುತ್ತದೆ. ಹಾಗೆಯೇ ಕಂಪ್ಯೂಟರಿನಲ್ಲಿ ಮೊದಲನೆಯದು ಮೆದುಳಿನಿಂದ ಪ್ರಶ್ನೆಯ ಗ್ರಹಿಕೆ, ಎರಡನೆಯದು ಮೆದುಳಿನಲ್ಲಿ ಸೂಕ್ತ ಉತ್ತರದ ಸಂಸ್ಕರಣೆ, ಮೂರನೆಯದು ಸಂಸ್ಕರಿಸಿದ ಉತ್ತರದ ವಿತರಣೆ, ಕಂಪ್ಯೂಟರಿನ ಕಾರ್ಯನಿರ್ವಹಣೆಯಲ್ಲೂ ಇವೇ ಪ್ರಕ್ರಿಯೆಗಳನ್ನು ಗುರುತಿಸಬಹುದು. ಕಂಪ್ಯೂಟರ್ ಯಂತ್ರವು ತನ್ನ ಅಕ್ಷರ ಫಲಕ, ಮೌಸ್, ಜಾಯಿಸ್ಟಿಕ್, ಫ್ಲಾಪಿ, ಬಿಲ್ಲೆ ಇತ್ಯಾದಿಗಳ ಮುಖಾಂತರ ನಿರ್ವಹಿಸಬೇಕಾದ ಕೆಲಸದ ಬಗ್ಗೆ ಸಂಕೇತ, ಸೂಚನೆಗಳನ್ನು ಗ್ರಹಿಸು-ತ್ತದೆ. ಈ ಸಂಕೇತಗಳು ಕೇಂದ್ರ ಸಂಸ್ಕರಣ ಘಟಕವನ್ನು ತಲುಪುತ್ತದೆ. ಈ ಕೇಂದ್ರ ಸಂಸ್ಕರಣ ಘಟಕವೇ ಕಂಪ್ಯೂಟರಿನ ಮೆದುಳಾಗಿದೆ. ಕಂಪ್ಯೂಟರಿಗೆ ತನ್ನದೇ ಆದ ಸಂಕೇತಗಳಿರುತ್ತವೆ. ಕಂಪ್ಯೂಟರನ್ನು ಬಳಸುವವರಿಗೆ ಅದರ ಸಂಕೇತಗಳು ತಿಳಿದಿರು-ವುದು ಅತ್ಯಾವಶ್ಯಕ.

ಇಂದು ವಿವಿಧ ಕ್ಷೇತ್ರಗಳಲ್ಲಿ ಕಂಪ್ಯೂಟರ್ ಬಳಕೆಯಾಗುತ್ತಿದೆ. ವೈಜ್ಞಾನಿಕ ಸಂಶೋಧನೆಗಳಲ್ಲಂತೂ ಇದರ ಪಾತ್ರ ಹಿರಿದು. ಬ್ಯಾಂಕು, ವಿಮಾನ ಸಂಸ್ಥೆ, ಕಛೇರಿ

ಇತ್ಯಾದಿಗಳಲ್ಲಿ ಲೆಕ್ಕ ಗಣನೆಗೆ ಅಂಕಿ ಅಂಶಗಳ ಪಟ್ಟಿ ತಯಾರಿಸಲು ಮತ್ತು ಉಪಯು ಮಾಹಿತಿ ಸಂಗ್ರಹಿಸಲು ಕಂಪ್ಯೂಟರುಗಳನ್ನು ಬಳಸುತ್ತಾರೆ. ವಿಮಾನ, ರೈಲು, ಬಸ್ ನಿಲ್ದಾಣಗಳಲ್ಲಿ ಸ್ಥಳ ಕಾದಿರಿಸುವ ಕೆಲಸವನ್ನು ಕಂಪ್ಯೂಟರ್ ಅಚ್ಚುಕಟ್ಟಾಗಿ, ತ್ವರಿ ವಾಗಿ ಮಾಡಬಲ್ಲುದು. ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸಿ ಸೂಕ್ತ ಹವಾ ಮುನ್ಸೂಚನೆ ನೀಡಲು. ಉತ್ತರ ಪತ್ರಿಕೆಗಳ ಮೌಲ್ಯಮಾಪನ, ಅಂಕಪಟ್ಟಿ ತಯಾರಿಕೆ, ಸಮಾಚಾರ ಪತ್ರಿಕೆಗಳ ಮುದ್ರಣ ಇತ್ಯಾದಿ ಕ್ಷೇತ್ರಗಳಲ್ಲೂ ಕಂಪ್ಯೂಟ ಕಾರ್ಯನಿರ್ವಹಿಸುತ್ತದೆ. ಇಷ್ಟೇ ಅಲ್ಲ ನಮಗೆ ಬೇಸರವಾದಾಗ ಆಟವಾಡಲು ಯಂತ್ರ ಉತ್ತಮ ಸಂಗಾತಿಯಾಗಬಲ್ಲದು.

ಇಂದು ವಿಜ್ಞಾನಯುಗ, ಇಂದಿನ ಬದುಕು ಯಂತ್ರ ವಿಜ್ಞಾನದ ಜೊತೆ ಹಾ ಹೊಕ್ಕಾಗಿದೆ. ನಮ್ಮ ನಿತ್ಯ ಜೀವನದ ಪ್ರತಿ ಹಂತದಲ್ಲೂ ಗಣಕಯಂತ್ರದ ಅ ಕಲ್ಪನೆಗೆ ಮೀರಿ ಬೆಳೆದಿದೆ. ಅಪಾರ ಸಂಖ್ಯೆ ಮಾನವಶಕ್ತಿಯನ್ನು ಕಡಿತಗೊಳಿಸಿ ಒ ಸಾಮಾನ್ಯ ಕಂಪ್ಯೂಟರ್ ಏನೆಲ್ಲ ಅದ್ಭುತ ಹಾಗೂ ಮಾಯಾಲೋಕವನ್ನೇ ಸೃಷ್ಟಿ ಆಧುನಿಕ ಯುಗದ ಸವಾಲುಗಳಿಗೆ ಕಂಪ್ಯೂಟರ್ ಮೂಲಕ ಉತ್ತರಿಸಲು ಸಾಧ್ಯ ಮಾನವನ ಕೌತುಕ ಹಾಗೂ ಆಶ್ಚರ್ಯಕರ ಘಟನೆಗಳಿಗೆಲ್ಲ ಉತ್ತೇಜನ ನೀಡು ಶಕ್ತಿಯನ್ನು ಹೊಂದಿದೆ

ಗಣಕಯಂತ್ರದ ಯುಗವೆಂದೇ ಕರೆದರೆ ತಪ್ಪಿಲ್ಲ. ಇಂದು ಯಾವ ಕ್ಷೇತ್ರದ ಗಣಕಯಂತ್ರದ ಸೇವೆ ಇಲ್ಲ ಎಂದು ಕೇಳಿದರೆ ಉತ್ತರಿಸುವುದು ಕಷ್ಟ. ಇಂದು ಕಂಪ್ಯೂಟರ್ ಮಾಡದ ಕೆಲಸವೇ ಉಳಿದಿಲ್ಲ. ಒಂದೆಡೆ ಅಪಾರ ನೆನಪಿನ ಭಂಡಾ ಇನ್ನೊಂದೆಡೆ ಅತಿ ವೇಗದ ಸಮರ್ಥ ಕಾರ್ಯಾಚರಣೆ, ನಮ್ಮ ಬುದ್ಧಿವಂತ ಚಾಣ ಹಾಗೂ ಹಲವು ಕಾರ್ಯಗಳ ಉದ್ದೇಶಕ್ಕೆ ಇಂದು ಕಂಪ್ಯೂಟರನ್ನು ಉಪಯೋಗಿಸ-ಲಾಗುತ್ತದೆ.

ತಂತಿಗಳು, ಟ್ರಾನ್ಸಿಸ್ಟರ್‌ಗಳು, ಕಾಂತಪಟ್ಟಿಗಳು, ಕಾಂತಕೋಶಗಳು ಮೊದ ಘಟಕಗಳಿಂದ ಸಂಕಲಿತವಾದ ಈ ಯಂತ್ರ ಇಂದು ಬರಿಯ ಗಣಕಯಂತ್ರವಲ್ಲ. ಸ್ಮರ ಕೋಶವಾಗಿದೆ. ಗಣಿತ, ವಿಜ್ಞಾನ, ಉದ್ಯಮ, ವ್ಯಾಪಾರ, ಶಿಕ್ಷಣ, ಕ್ರೀಡೆ, ಮನರಂಜನೆ ಬಾಹ್ಯಾಕಾಶ ನೌಕೆಗಳ ಕ್ಷಿಪಣಿ, ಉಪಗ್ರಹಗಳ ನಿಯಂತ್ರಣ, ರಕ್ಷಣೆ, ಆಡಳಿ ವೈದ್ಯಕೀಯ, ಸಾರಿಗೆ ಹೀಗೆ ಆಧುನಿಕ ಜೀವನದಲ್ಲಿ ಹೆಜ್ಜೆ ಹೆಜ್ಜೆಗೆ ಉಪಯುಕ್ತ ವಾಗಿದೆ. ಮರೆಯುವ ಸ್ವಭಾವದ ಮಾನವನ ಮೆದುಳಿಗೆ ವರವಾಗಿ ಬಂದಿದೆ. ಸಂಪರ್ಕ ಮಾಧ್ಯಮದಲ್ಲಿ ನಾವಿಂದು ಕ್ರಾಂತಿ ಸಾಧಿಸಿದ್ದೇವೆ. ಜಗತ್ತಿನ ಎಲ್ಲಾ ಸುದ್ದಿಗಳನ್ನು ಕ್ಷಣಾರ್ಧದಲ್ಲಿ ತಿಳಿಯಲು ಟೆಲಿಫೋನ್ ವಿಭಾಗ ಕಂಪ್ಯೂಟರ್‌ನಿಂದ ಇಂದು ಮಹಾನ ಯಶಸ್ಸನ್ನು ಕೊಟ್ಟಿದೆ.

ಅನೇಕ ಮಹಾನಗರಗಳ ಬಸ್‌ನಿಲ್ದಾಣ ಇಂದು ಮುಂಗಡ ಟಿಕೆಟ್ ಸಲುವಾಗಿ ಕ್ಯೂ ಹೊಂದಿದೆ. ಅಲ್ಲಿಯ ಕ್ಯೂ ಕಡಿಮೆ ಮಾಡಲು ಮುಂಗಡ ಟಿಕೆಟನ್ನು ಬಹುಬೇಗ ನೀಡಲು ಕಂಪ್ಯೂಟರ್ ಯಂತ್ರದ ಸಹಾಯ ಬಳಸಲಾಗುತ್ತದೆ. ಯಾವ ಟ್ರೇನಿನ ಎಷ್ಟನೆಯ ನಂಬರಿನ ಸ್ಥಳ ಎಂಬುದನ್ನು ಸಹ ತಿಳಿಸುತ್ತದೆ. ದೊಡ್ಡ ಹೊಟೆಲ್‌ಗಳಲ್ಲಿ ಬಿಲ್ಲು, ಪರೀಕ್ಷೆ, ಫಲಿತಾಂಶ ಪ್ರಮಾಣಪತ್ರ, ಓಲಂಪಿಕ್ ಕ್ರೀಡೆಯಲ್ಲಿ ನೀವು ಓಡಿದಂತೆ ಸೆಕೆಂಡಿನ ವಿಭಾಗದ ಆಧಾರದ ಮೇಲೆ ತೀರ್ಪು ನೀಡುವುದಕ್ಕೂ ಕಂಪ್ಯೂಟರ್ ಸಹಾಯಕ.

ಇಂದು ಪ್ರಗತಿ ಹೊಂದಿದ, ಪ್ರಗತಿಪರ, ಹಿಂದುಳಿದ ರಾಷ್ಟ್ರಗಳನ್ನು ಗುರುತಿಸಿದ್ದೇವೆ. ಯಾವುದೇ ಪ್ರಗತಿದಾಯಿ ರಾಷ್ಟ್ರ, ಪ್ರಗತಿಪರ ರಾಷ್ಟ್ರಗಳು ಕಂಪ್ಯೂಟರ್ ನೆರವನ್ನು ಸಂಪೂರ್ಣ ಅವಲಂಬಿಸಿದೆ. ಭರದಿಂದ ಬೆಳೆಯುತ್ತಿರುವ ವೈದ್ಯಕೀಯ, ಬಾಹ್ಯಾಕಾಶ, ತಂತ್ರಜ್ಞಾನ ರಂಗದಲ್ಲಿ ಕ್ರಾಂತಿ ಸಾಧಿಸಲು ಕಂಪ್ಯೂಟರ್ ನೆರವು ಕಾರಣವಾಗಿದೆ. ಕೇವಲ ಇದೊಂದು ಕೂಡಿಸುವ, ಕಳೆಯುವ ಯಂತ್ರವಲ್ಲ. ಇದು ಪ್ರಗತಿಯ ಕೊಂಡಿಯಾಗಿದೆ. ನಮ್ಮ ಮಾಹಿತಿಯನ್ನು, ಅಂಕಿಅಂಶವನ್ನು ಏನನ್ನು ಮಾಡಬೇಕೆಂಬುದನ್ನು ಗಣಕಯಂತ್ರದಲ್ಲಿ Feed (ಫೀಡ್) ಮಾಡಿದಾಗ ಅದರ ಸಹಾಯವನ್ನು ಮುಂದೆ ಬಳಸಬಹುದು.

ಆಧುನಿಕ ಯುಗದಲ್ಲಿನ ಅನೇಕ ಸವಾಲುಗಳಿಗೆ ನಾವಿಂದು ಸಜ್ಜಾಗಬೇಕಿದೆ. ಅದಕ್ಕೆ ಉತ್ತರಿಸಲು, ಕಾರ್ಯೋನ್ಮುಖರಾಗಲು ನಮ್ಮ ಗಣಕಯಂತ್ರ ಸಹಾಯ ಮಾಡುತ್ತದೆ. ಇದರಲ್ಲಿ ಮಾಹಿತಿಯನ್ನು ತುಂಬಲು ನಮ್ಮ ಬುದ್ಧಿಶಕ್ತಿ ಇನ್ನು ಹರಿತವಾಗಬೇಕಾಗಿದೆ.

— **ಭವ್ಯಾ ಎಂ. ಹೆಗಡೆ**
ಪ್ರಥಮ ಪಿ, ಯು. ಸಿ.

# ಚುಟುಕುಗಳು

## 1. ಸಿಡ್ನಿ ಒಲಂಪಿಕ್

ಸಿಡ್ನಿಯಲ್ಲಿ ನಡೆಯಿತು ಒಲಂಪಿಕ್ ಆಟ
ಅದು ನೀಡಿತು ಕ್ರೀಡಾಪಟುಗಳಿಗೆ ರಸದೂಟ
ಅಮೇರಿಕಾ ಗಳಿಸಿತು ಮೊದಲನೆ ಸ್ಥಾನ
ಮಲ್ಲೇಶ್ವರಿ ಉಳಿಸಿದಳು ಭಾರತದ ಮಾನ

## 2. ಮ್ಯಾಚ್ ಫಿಕ್ಸಿಂಗ್

ಎಲ್ಲೆಡೆ ಕೇಳಿದರೂ ಹೇಳುವರು ಮೋಸದಾಟ
ಆದರೂ ನೋಡುವರು ನಮ್ಮ ಜನ ಕ್ರಿಕೇಟ್ ಆಟ
ಸಿ. ಬಿ. ಐ. ಬಲೆಗೆ ಸಿಕ್ಕಿಬಿದ್ದವರು ಕೆಲವರು
ಇನ್ನೆಷ್ಟು ಜನ ಇರುವರೋ ಆ ದೇವರೇ ಬಲ್ಲರು.

## 3. ಕ್ಲಿಂಟನ್‌ರ ಭಾರತದ ಭೇಟಿ

ಬಿಲ್‌ಕ್ಲಿಂಟನ್‌ರ ಭಾರತ ಪ್ರವಾಸ
ಎಲ್ಲರಿಗೂ ನೀಡಿತು ಸಂತಸ
ಅವರು ಮಾಡಿದರು ನಿಶ್ಯಸ್ತ್ರೀಕರಣ ಭಾಷಣ
ಇದಕ್ಕೆ ಭಾರತದ ಅಣ್ವಸ್ತ್ರವೇ ಕಾರಣ

## 4. ಗುಟಕಾ

ಯಾರ ಬಾಯಲ್ಲಿ ನೋಡಿದರೂ ಗುಟಕಾ
ಮುಂದೆ ಇವರೇ ಆಡುವರು ಮಟಕಾ
ಹೀಗಾದರೆ ಇಂದಿನ ಯುವಪೀಳಿಗೆ
ಆಗುವುದೇ ನಮ್ಮ ದೇಶದ ಬೆಳವಣಿಗೆ ?

## 5. ಚರ್ಚ ಬಾಂಬ್ ಸ್ಫೋಟ

ಧರ್ಮ ಧರ್ಮಗಳ ನಡುವೆ ಹೊಡೆದಾಟ
ಅನೇಕ ಚರ್ಚಗಳಲ್ಲಿ ಬಾಂಬ ಸ್ಫೋಟ
ಹೀಗಾದರೆ ಧರ್ಮ ಸಮನ್ವಯತೆಯ ಕನಸು
ಎಂದೆಂದಿಗೂ ಆಗಲಾರದು ನನಸು.

— ಬೀಬಿ ನಜೀನ, ಚಂದಾ

# ಆರ್ಥಿಕ

ದೇಶದ ಸಂಪತ್ತನ್ನು
ಆರ್ಥಿಕ ಪ್ರಗತಿಯು ಗುರಿ.
ಕಾಯ್ದುಕೊಳ್ಳುವುದು ಅ
ಪ್ರಕೃತಿಯನ್ನು ಸೂರೆಗೈ
ಇಂದಿನ ಜಗತ್ತನ್ನು ಎಚ್ಚ
ಪರಿಸರ ಉಳಿಸಬೇಕಾದ
ಬೇಕು. ಪರಿಸರವೂ ಸಮ
ಒಂದಕ್ಕೊಂದು ಜಂಟಿಯ
ನೀತಿಯನ್ನು ರೂಢಿಸಿದರ
ನೀಡಬಹುದು.

ಒಂದು ದೃಷ್ಟಿಯ
ಆರ್ಥಿಕ ಪ್ರಗತಿ ಮಾಡದೆ
ಪರಿಸರ ಮತ್ತು ಆರ್ಥಿಕ
ನೀಡುತ್ತ ಬಂದಿರುವುದು
ಬಳಸಿ ಗರಿಷ್ಠ ಆರ್ಥಿಕ
ಸೂಕ್ತವಾಗಿ ತಲುಪಿಸುವ
ಸಾಧಿಸುವುದು ಎಲ್ಲ ರಾ

ದೇಶದಲ್ಲಿಯ ನಿ
ಪರಿಸರ ಸನ್ನಿವೇಶಗಳ ಸ
ಇವೆಲ್ಲ ಸಂಪನ್ಮೂಲಗಳ
ವಂತೆ ಮಾಡುವುದೇ ವ
ವಲಯ, ಕೈಗಾರಿಕಾ ವ
ವಹಿಸುತ್ತದೆ ಕೃಷಿ ವಲ
ಕಾರಣ ಪ್ರಕೃತಿಯ ಭೂ
ವಾಗಿ ಬಳಸಲು ಕೃಷಿ ಕ
ಪರಿಸ್ಥಿತಿಯನ್ನು ಬಳಸಿ

# ಆರ್ಥಿಕ ಪ್ರಗತಿ ಮತ್ತು ಪರಿಸರ

ದೇಶದ ಸಂಪತ್ತನ್ನು ಸಮೃದ್ಧಿಗೊಳಿಸಿ ಸುಖೀ ಸಮಾಜವನ್ನು ಸೃಷ್ಟಿಸುವದು ಆರ್ಥಿಕ ಪ್ರಗತಿಯ ಗುರಿ. ಇದರ ಸಂಗಡ ನಮ್ಮ ಸುತ್ತಮುತ್ತಲಿನ ಪರಿಸರ ಸಮತೋಲನ ಕಾಯ್ದುಕೊಳ್ಳುವುದು ಅಷ್ಟೇ ಅವಶ್ಯಕ. ತ್ವರಿತ ಆರ್ಥಿಕ ಪ್ರಗತಿಯ ಅಮಲಿನಲ್ಲಿ ಪ್ರಕೃತಿಯನ್ನು ಸೂರೆಗೈದು ಮನುಕುಲಕ್ಕೆ ಕಂಟಕಪ್ರಾಯವಾಗಿರುವ ಪರಿಸರ ನಾಶ ಇಂದಿನ ಜಗತ್ತನ್ನು ಎಚ್ಚರಿಸುತ್ತಲಿದೆ. ಕೈಗಾರಿಕೀಕರಣದಿಂದ ಆರ್ಥಿಕ ಪ್ರಗತಿ ನಿಲ್ಲಿಸಿ ಪರಿಸರ ಉಳಿಸಬೇಕಾದ ಪರಿಸ್ಥಿತಿ ಬಂದೊದಗಿದೆ. ಮನುಕುಲಕ್ಕೆ ಆರ್ಥಿಕ ಪ್ರಗತಿಯೂ ಬೇಕು. ಪರಿಸರವೂ ಸಮತೋಲನದಲ್ಲಿರಬೇಕು. ಪರಿಸರ ಹಾಗೂ ಆರ್ಥಿಕ ಪ್ರಗತಿ ಒಂದಕ್ಕೊಂದು ಜಂಟಿಯಾಗಿ ಕಾರ್ಯನಿರ್ವಹಿಸಿದರೆ ಪರಿಸರ ಪರ ಆರ್ಥಿಕ ಅಭಿವೃದ್ಧಿ ನೀತಿಯನ್ನು ರೂಢಿಸಿದರೆ ಮುಂದಿನ ಜನಾಂಗಕ್ಕೆ ಸುಖೀ ಜೀವನವನ್ನು ಕಾಣಿಕೆಯಾಗಿ ನೀಡಬಹುದು.

ಒಂದು ದೃಷ್ಟಿಯಲ್ಲಿ ಪರಿಸರದ ಬಳಕೆ ಮಾಡದೇ ಆರ್ಥಿಕ ಪ್ರಗತಿ ಸಾಧ್ಯವಿಲ್ಲ. ಆರ್ಥಿಕ ಪ್ರಗತಿ ಮಾಡದೇ ಕೇವಲ ಪರಿಸರ ಸಂರಕ್ಷಿಸುವುದು ಸಾಧುವೂ ಅಲ್ಲ. ಹಾಗಿದ್ದರೆ ಪರಿಸರ ಮತ್ತು ಆರ್ಥಿಕ ಪ್ರಗತಿಗಳೆರಡೂ ಒಂದಕ್ಕೊಂದು ವಿರುದ್ಧ ಸಂಕೇತವನ್ನು ನೀಡುತ್ತ ಬಂದಿರುವುದು ದುರದೃಷ್ಟಕರ. ದೇಶದ ಸಂಪನ್ಮೂಲಗಳನ್ನು ಸಮರ್ಪಕವಾಗಿ ಬಳಸಿ ಗರಿಷ್ಠ ಆರ್ಥಿಕ ಉತ್ಪನ್ನವನ್ನು ಸಾಧಿಸಿ ಜನಸಮುದಾಯಕ್ಕೆ ಅದರ ಫಲವನ್ನು ಸೂಕ್ತವಾಗಿ ತಲುಪಿಸುವುದೇ ಆರ್ಥಿಕ ಪ್ರಗತಿ. ಇಂತಹ ಆರ್ಥಿಕ ಪ್ರಗತಿಯನ್ನು ಸಾಧಿಸುವುದು ಎಲ್ಲ ರಾಷ್ಟ್ರಗಳ ಹೆಗ್ಗುರಿ.

ದೇಶದಲ್ಲಿಯ ನಿಸರ್ಗ ಸಂಪತ್ತು, ಜನ ಸಂಪತ್ತು, ಖನಿಜ ಸಂಪತ್ತು ಮತ್ತು ಪರಿಸರ ಸನ್ನಿವೇಶಗಳ ಸೂಕ್ತ ಬಳಕೆಯ ಕಾರ್ಯ ವಿಧಾನವೇ ಆರ್ಥಿಕ ಅಭಿವೃದ್ಧಿ. ಇವೆಲ್ಲ ಸಂಪನ್ಮೂಲಗಳನ್ನು ಪರಿಶೋಧಿಸಿ ಸಂಸ್ಕರಿಸಿ ಮಾನವನ ಹಿತಕ್ಕೆ ಬಳಕೆಯಾಗುವಂತೆ ಮಾಡುವುದೇ ಮಹತ್ವದ ಕಾರ್ಯ. ಪ್ರತಿ ದೇಶದ ಆರ್ಥಿಕ ಪ್ರಗತಿಯಲ್ಲಿ ಕೃಷಿ ವಲಯ, ಕೈಗಾರಿಕಾ ವಲಯ, ಹಾಗೂ ಸೇವಾ ವಲಯಗಳು ಗಣನೀಯವಾಗಿ ಪಾತ್ರ ವಹಿಸುತ್ತದೆ ಕೃಷಿ ವಲಯ ಅತಿಹೆಚ್ಚು ಪರಿಸರ ಸಂರಕ್ಷಣಾ ವಲಯವೆಂದರೆ ತಪ್ಪಲ್ಲ. ಕಾರಣ ಪ್ರಕೃತಿಯ ಭೂಮಿ, ಜಲ, ವಾಯು, ಶಾಖ ಹಾಗೂ ಆಕಾಶವನ್ನು ನೈಸರ್ಗಿಕವಾಗಿ ಬಳಸಲು ಕೃಷಿ ಕಾರ್ಯ ಹೆಚ್ಚು ಸೂಕ್ತವಾದದ್ದು. ಆದರೆ ಪ್ರಕೃತಿಯ ಸಹಜ ಪರಿಸ್ಥಿತಿಯನ್ನು ಬಳಸಿಕೊಂಡು ಒಕ್ಕಲತನವನ್ನು ಮಾಡುವುದನ್ನು ಬಿಟ್ಟು ಅತಿ ಬೇಗನೆ

ಅತಿ ಹೆಚ್ಚು ಕೃಷಿ ಉತ್ಪನ್ನ ಪಡೆಯುವುದಕ್ಕಾಗಿ ಆಧುನಿಕ ಯಂತ್ರ-ತಂತ್ರಗಳ
ಬಳಸುತ್ತಲಿದ್ದಾರೆ. ಆಧುನಿಕ ಮಿಶ್ರ ತಳಿ ಬೀಜಗಳನ್ನು, ಊಳುವ ಹಾಗೂ ಬಿ
ಆಧುನಿಕ ವಿಧಾನಗಳು, ಕ್ರಿಮಿಕೀಟ ನಾಶಕಗಳು, ರಾಸಾಯನಿಕ ಗೊಬ್ಬರಗಳು ಕೃತ
ನೀರಾವರಿ ವಿಧಾನಗಳು ಪ್ರಕೃತಿ ಸಹಜ ಗುಣವನ್ನು ದಿಕ್ಕೆಡಿಸಿವೆ. ಇದರಿಂದ
ವಲಯದಲ್ಲಿಯೂ ಪರಿಸರ ನಾಶಕ್ಕೆ ಕೊಡಲಿ ಏಟು ಬಿದ್ದಂತಿದೆ. ಇದಕ್ಕೆ ಅತಿ ಬೆ
ಬೆಳೆಯುತ್ತಿರುವ ಜನಸಂಖ್ಯೆ ಮತ್ತು ಮಾನವನ ಅತೀ ಆಸೆಯೇ ಕಾರಣ.
ಸುತ್ತಲಿನ ಪರಿಸರ ಸನ್ನಿವೇಶಕ್ಕೆ ಅಡ್ಡಿ ಬರದಂತೆ ನಿಸರ್ಗ ಚಕ್ರಕ್ಕನುಗುಣವಾಗಿ
ಕಾರ್ಯ ಕೈಗೊಳ್ಳುವುದರಿಂದ ಮಾತ್ರ ಪರಿಸರವನ್ನು ಕೃಷಿಯನ್ನು ರಕ್ಷಿಸಲು ಕಾ
ಪರಿಸರ ಪೂರಕವಾದ ವಿಧಿ-ವಿಧಾನಗಳನ್ನು ಸಾಧನ ಸಾಮಗ್ರಿಗಳನ್ನು ಗರಿಷ್ಠ
ಬಳಸಿ ಉತ್ಪಾದನೆ ಹೆಚ್ಚಿಸುವುದು ಸಾಧ್ಯ.

ಪರಿಸರ ನಾಶಕ್ಕೆ ಅತ್ಯಂತ ಮಹತ್ವದ ಕಾರಣವೆಂದರೆ ಅತಿಯಾದ ಕೈಗಾರೀಕರ
ಅದಕ್ಕಾಗಿ " ಕೈಗಾರೀಕರಣ ನಿಲ್ಲಿಸಿ ಪರಿಸರ ಉಳಿಸಿ " ಎಂಬ ಕೂಗು ಎಲ್ಲೆಡೆಯಿಂದ
ಕೇಳಿ ಬರುತ್ತಲಿದೆ. ಬೃಹತ್ ಪ್ರಮಾಣದ ಉದ್ದಿಮೆಗಳು, ಗಣಿಗಾರಿಕೆಗಳು, ಕಾಮಿ
ವರ್ಗ ಇವುಗಳು ನಮ್ಮ ಪರಿಸರದ ಅಸಮತೋಲನೆಗೆ ಅಡ್ಡಿ ಮಾಡಿದೆ ದೈತ್ಯಕಾ
ಯಂತ್ರಗಳು ಉಗುಳುವ ಹೊಗೆಯಿಂದ ವಾಯು ಕಲುಷಿತವಾಗುತ್ತಿದೆ. ಅವು ಹೊ
ಹಾಕುವ ನಷ್ಟ ಪದಾರ್ಥಗಳು ಹಾಗೂ ಕಲುಷಿತ ಜಲ ನಾವು ಬಳಸುವ ನೀರ
ಮಲಿನಗೊಳಿಸಿದೆ. ಅತ್ಯಧಿಕ ವಾಹನಗಳ ಓಡಾಟ, ಕಿರುಚಾಟಗಳಿಂದ ಶಬ್ದ ಮಾಲಿ
ಉಂಟಾಗಿದೆ. ಒಂದೇ ಕಡೆಗೆ ಕೂಲಿಗಾಗಿ ಬಂದ ಸಹಸ್ರಾರು ಸಂಖ್ಯೆಯ ಕೂಲಿಕಾ
ಕೇಂದ್ರೀಕರಣದಿಂದ ಕೊಳಗೇರಿಗಳು ಹೆಚ್ಚುತ್ತಲಿದೆ ಸಮಾಜ ಘಾತುಕ ಹಿಂ
ಚಟುವಟಿಕೆಗಳು, ಅನೈತಿಕ ಕೃತ್ಯಗಳು ಮಿತಿಮೀರಿ ಹೆಚ್ಚುತ್ತಿವೆ. ಇವುಗಳಿಂದ ಆರ್ಥ
ಸಾಮಾಜಿಕ, ರಾಜಕೀಯ ಹಾಗೂ ಆಡಳಿತ ಅಸಮರ್ಥತೆಗೆ ಕಾರಣವಾಗಿವೆ. ಇಂತ
ದುಸ್ಥಿತಿಗಳನ್ನು ಸೃಷ್ಟಿಗೊಳಿಸಿ ಆರ್ಥಿಕ ಪ್ರಗತಿ ಸಾಧಿಸುವುದು ಆವಶ್ಯಕವೆ? ಸೂಕ್ತ
ಅಥವಾ ಅನಿವಾರ್ಯವೇ ? ಎಂಬ ಪ್ರಶ್ನೆಗಳನ್ನು ಸಮರ್ಪಕವಾಗಿ ಉತ್ತರಿಸಬೇ
ನಮ್ಮ ಸುತ್ತಲಿನ ಸುಂದರ ಪ್ರಕೃತಿಯನ್ನು ಸುರಕ್ಷಿತವಾಗಿಡಲು ಸಾಧ್ಯವಿಲ್ಲ ಎಂಬುದ
ಮನಗಾಣಬೇಕು. ಪರಿಸರವನ್ನು ನಾಶಮಾಡದೇ ಅಥವಾ ಕನಿಷ್ಠ ಪ್ರಮಾಣದ
ಅವಶ್ಯಕತೆಗನುಗುಣವಾಗಿ ಬಳಸಿ ಕಾರ್ಯೋನ್ಮುಖವಾಗುವುದೇ ಸೂಕ್ತ.

ಆರ್ಥಿಕ ಪ್ರಗತಿಯ ಹೆಸರಿನಲ್ಲಿ ದಿಕ್ಕು ದಿಸೆಗಳಿಲ್ಲದೇ ಮಾಹಿತಿ ತಂತ್ರಜ್ಞಾ
ಸ್ಫೋಟ, ವ್ಯಾಪಾರ ವ್ಯವಹಾರಗಳಲ್ಲಿ ಲೆಕ್ಕತಪ್ಪಿ ಹೆಚ್ಚುತ್ತಿರುವ ಅಕೃತ್ಯಗ
ಮಾನವನ ಶಾಂತಿಗೆ ಧಕ್ಕೆತಂದಿವೆ.

ಈ ಮೇಲಿನ ಎಲ್ಲಾ ವಿಷಯಗಳನ್ನು ಮಾನವನು ತನ್ನ ವಿವೇಚನಾ ಶಕ್ತಿಯ ಒರೆಗಲ್ಲಿಗೆ ಹಚ್ಚಿದಾಗ ಸರಿಯಾದ ತೀರ್ಮಾನ ಕೈಗೊಳ್ಳಬಹುದು. ಮಾನವನ ಉಳಿವಿಗೆ ಹಾಗೂ ಬೆಳವಣಿಗೆಗೆ ಆರ್ಥಿಕ ಉನ್ನತಿ ಎಷ್ಟು ಮಹತ್ವವೋ ಅಷ್ಟೇ ಪರಿಸರ ರಕ್ಷಣೆಯೂ ಮಹತ್ವವಾಗಿದೆ. ಆರ್ಥಿಕ ಪ್ರಗತಿಯ ಪ್ರಮಾಣ ಹಾಗೂ ವೇಗ ಆ ದೇಶದ ಜನಸಮುದಾಯದ ರಕ್ಷಣೆಗೆ ಪೂರಕವಾಗಿರಬೇಕು. ಪರಿಸರವನ್ನು ಉಳಿಸಿಕೊಂಡು ಆರ್ಥಿಕ ಉನ್ನತಿಯನ್ನು ಪಡೆಯುವ ನೀತಿ ನಮ್ಮದಾಗಬೇಕು. ಆರ್ಥಿಕ ಪ್ರಗತಿಯ ಸ್ಥಿರೀಕರಣ ಪರಿಸರ ರಕ್ಷಣೆಯಲ್ಲಿ ಕೊನೆಗೊಳ್ಳಬೇಕು. ಪರಿಸರ ಸಹಿಸಬಲ್ಲ ಆರ್ಥಿಕ ಯೋಜನೆಗಳು ಅನುಷ್ಠಾನಕ್ಕೆ ಬರುವಂತಾಗಬೇಕು. ಅತಿ ಕಡಿಮೆ ಪ್ರಮಾಣದಲ್ಲಿ ಪರಿಸರಕ್ಕೆ ಧಕ್ಕೆ ತರುವ ಹಾಗೂ ಅತೀ ಹೆಚ್ಚು ಆರ್ಥಿಕ ಪ್ರಗತಿ ಸಾಧಿಸಬಲ್ಲ ಆರ್ಥಿಕ ಯೋಜನೆಗಳನ್ನು ಪ್ರೋತ್ಸಾಹಿಸಬೇಕು. ಉದ್ಯಮಗಳ ಸ್ಥಾಪನೆಯಾಗಲೀ ನೀರಾವರಿ ಯೋಜನೆಯಾಗಲೀ, ಶಕ್ತಿ ಸಂಪನ್ಮೂಲಗಳ ಅಭಿವೃದ್ಧಿಯಾಗಲೀ ಮೂಲತಹ ಪರಿಸರ ನಾಶ ಯೋಜನೆಗಳಾಗಕೂಡದು. ಅಂದರೆ ಮಾತ್ರ ಪರಿಸರವು ಉಳಿಯುವುದು ನಾವೂ ಉಳಿಯುತ್ತೇವೆ. " ಅದಕ್ಕಾಗಿ ನಾವು ಉಳಿಯೋಣ ನಮ್ಮ ಪರಿಸರವನ್ನು ಉಳಿಸೋಣ " ಇದು ನಮ್ಮ ಘೋಷಣೆಯಾಗಬೇಕು.

— ಮಹೇಶ ವಿ. ನಾಯ್ಕ
ದ್ವಿತೀಯ ಪಿ. ಯು. ಸಿ.
ಜ. ವಿ. ಸಂ. ಪ. ಪೂ. ಕಾಲೇಜ್
ಕಡತೋಕಾ.



## ಇವರ ಸೊತ್ತು

ಕುರಿಗಳೇ ಕೆಲವರಿಗೆ ಬಹು ದೊಡ್ಡ ಸೊತ್ತು
ಇವು ನೋಡಿ ಈ ಜನಕೆ ತರವಯ್ಯ ಕುತ್ತು
ಆಹಾರ ಹುಡುಕಾಡಿ ಮೇಯುತ್ತ ಸುತ್ತು
ಬೇಕಾದ ಸಮಯಕ್ಕೆ ಒಡ್ಡುವವು ಕತ್ತು.

— ಮಧುಸೂದನ ಭಂಡಾರಿ
VIII B

## ಚುಟುಕುಗಳು

### ಕಾರ್ಖಾನೆ ಮಾಲಿಕ

ದಿನವಿಡೀ ಕೂಲಿಗಳು ಸುರಿಸಿರುವ ರಕ್ತ
ಕುಡಿಕುಡಿದು ಮಾಲಕನು ಆಗುವನು ಶಕ್ತ
ಕಾರಣವು ಈ ಇವನು ಸರಕಾರಿ ಭಕ್ತ
ಹೀಗಾಗಿ ಕ್ರೌರ್ಯತೆಗೆ ದ್ವಾರವೈ ಮುಕ್ತ.

### ಓಡೋಡಿ ಬಾ

ಬಾ ನೀನು ಆಗಾಗ ಬಾರದಿರೆ ಗೊತ್ತೆ ?
ಈ ಬಾಳೆ ನೀರಸವು ನೆನಪಿರಲಿ ಮತ್ತೆ
ನೀನಿರದ ಕ್ಷಣವೊಂದು ದಿನದಂತೆ ಮನಕೆ
ಓಡೋಡಿ ಬಾ ನನ್ನ ಮನದನ್ನೆ ಚುಟುಕೆ.

— ಮಧುಸೂದನ ಭಂಡಾರಿ
VIII B

### ಜೀವನ

ಜೀವನವೆಂಬ ಸಾಗರದಲ್ಲಿ ಅಲೆಗಳ ಹಾಗೆ ಏರಿಳಿತ
ನೋವು ನಲಿವುಗಳ ಜಂಜಾಟ
ವಿಧಿಯು ಆಡುವ ತುಂಟಾಟ
ಬೇಸರ ತರುವ ಮನದಾಟ
ಸಾಕು ಸಾಕೆಂಬ ಜೀವನದಾಟ.

### ಸ್ನೇಹಿತೆ

ಬಾಲ್ಯದ ಸ್ನೇಹಿತೆಯ ಜೊತೆ
ಕಳೆದ ಆ ದಿನಗಳು ತುಂಬ ಸೊಗಸು
ಈಗ ಅದೊಂದು ಕನಸು
ಆ ಕನಸಿನ ಲೋಕವೇ ಇಷ್ಟ
ಸ್ನೇಹಿತೆ ದೂರವಾದಾಗ ಮನಸ್ಸಿಗೆ ಬಲು ಕಷ್ಟ.

— ಬೀಬಿ ನಜೀನ ಚಂದಾವರ
I P.U.C.

## ನವೋದಯ

ಸುಮಾರು ಒಂದು ಸಾ
ನಡುಗನ್ನಡ ವಿವಿಧ ರೀತಿಯ
ಬತ್ತನೆಯ ಶತಮಾನದ ಮಧ
ತ್ತದೆ. ಚಂಪು, ವಚನ, ರಗ
ಯಶಸ್ವಿಯಾಗಿ ಅಭಿವೃದ್ಧಿ
ಗಾಗಿ ಹಾತೊರೆಯುತ್ತಿರುವ
ರೀತಿಯ ಕಾವ್ಯ ಶೈಲಿಯಿಂದ

ಕ್ರಿ. ಶ. ಸುಮಾರು ೧
ಕೊನೆಯ ಹೊತ್ತಿಗೆ ಕನ್ನಡ
ಬರುತ್ತದೆ. ಕನ್ನಡವು ತನ್ನ
ಕವು ಶೋಚನೀಯ ಸ್ಥಿತಿಯ
ನಾಡು ಕಾವೇರಿಯಿಂದ ಗೋ
ಮಾತನಾಡುವ ಜನ ಏಕಚಕ
ಗುತ್ತದಷ್ಟೆ ! ಉತ್ತರ ಕರ್ನಾ
ತಕ್ಕೆ ಸೇರಿದ್ದು ಅಲ್ಲಿಯ ಜನ
ಬೇಕಾಗಿತ್ತು. ಅಲ್ಲಿನ ಮತ್ತೊ
ಭಾಗ ಮಹಾರಾಷ್ಟ್ರಕ್ಕೆ ಸೇರಿ
ತನ್ನ ಅಸ್ತಿತ್ವಕ್ಕಾಗಿ ಹೋರ
ಪುರ, ಬೆಳಗಾಂವಿ ಜಿಲ್ಲೆಗಳನ್ನ
ಹೋರಾಡಲು ಸಾಧ್ಯವಿಲ್ಲದ
ದಕ್ಷಿಣ ಭಾಗ ಕೇರಳದ ಆಡಳಿ
ಉತ್ತರ ಕನ್ನಡ ಜಿಲ್ಲೆ ಮುಂ
ಕನ್ನಡ ವಾಹಿನಿಯು ಸಂಪೂ
ಯಾಯಿತು ಎಂದು ಹೇಳಬೇಕ

ಕ್ರಿ. ಶ. ೧೮೫೭ ರಲ್ಲಿ
ಜನರಲ್ಲಿಯೂ ಸ್ವಾತಂತ್ರ್ಯ

# ನವೋದಯ ಕಾಲದ ಕನ್ನಡ ಕಾವ್ಯ–ಚಿಂತನೆ

ಸುಮಾರು ಒಂದು ಸಾವಿರ ವರ್ಷಗಳಷ್ಟು ದೀರ್ಘ ಅವಧಿಯಲ್ಲಿ ಹಳಗನ್ನಡ, ನಡುಗನ್ನಡ ವಿವಿಧ ರೀತಿಯಲ್ಲಿ ಹರಿದು ಬಂದ ಕನ್ನಡ ಕಾವ್ಯ ವಾಹಿನಿಯು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ತನ್ನ ದಿಕ್ಕನ್ನ ಬದಲಿಸಿದ್ದು ಕಂಡು ಬರುತ್ತದೆ. ಚಂಪು, ವಚನ, ರಗಳೆ, ಸಾಂಗತ್ಯ ಮುಂತಾದ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಯಶಸ್ವಿಯಾಗಿ ಅಭಿವೃದ್ಧಿ ಹೊಂದಿದ್ದ ಕಾವ್ಯ ಪ್ರತಿಭೆ ಹೊಸ ಹೊಸ ಮಾಧ್ಯಮಗಳಿಗಾಗಿ ಹಾತೊರೆಯುತ್ತಿರುವಂತೆ ತೋರಿತು. ಹೊಸಗನ್ನಡದ ಬಳಕೆಯಿಂದ ಹಳೆಯ ರೀತಿಯ ಕಾವ್ಯ ಶೈಲಿಯಿಂದ ವಿಮೋಚನೆ ಪಡೆದುಕೊಂಡಿದ್ದು ಅದೇ ವೇಳೆಯಲ್ಲಿಯೇ.

ಕ್ರಿ. ಶ. ಸುಮಾರು ೧೭೦೦ರ ವೇಳೆಗೆ ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ಕೊನೆಯ ಹೊತ್ತಿಗೆ ಕನ್ನಡದಲ್ಲಿ ಪ್ರೌಢಕಾವ್ಯ ರಚನೆ ನಿಂತು ಹೋದದ್ದು ಕಂಡು ಬರುತ್ತದೆ. ಕನ್ನಡವು ತನ್ನ ಅಸ್ತಿತ್ವಕ್ಕಾಗಿ ಹೋರಾಡಬೇಕಾಗಿದ್ದ ಉತ್ತರ ಕರ್ನಾಟಕವು ಶೋಚನೀಯ ಸ್ಥಿತಿಯಲ್ಲಿತ್ತು. ನಂಜುಂಡ ಕವಿಯು ಹೇಳಿದ ಪ್ರಕಾರ ಕನ್ನಡ ನಾಡು ಕಾವೇರಿಯಿಂದ ಗೋದಾವರಿಯುವರೆಗೆ ಹರಡಿದ್ದರೂ, ಒಂದು ಭಾಷೆಯನ್ನು ಮಾತನಾಡುವ ಜನ ಏಕಚಕ್ರಾಧಿಪತ್ಯದಲ್ಲಿದ್ದರು ಎನ್ನುವುದನ್ನ ವಿಮರ್ಶಿಸಬೇಕಾಗುತ್ತದಷ್ಟೆ! ಉತ್ತರ ಕರ್ನಾಟಕದ ಒಂದು ಭಾಗ ಹೈದರಾಬಾದ್ ನಿಜಾಮನ ಆಡಳಿತಕ್ಕೆ ಸೇರಿದ್ದು ಅಲ್ಲಿಯ ಜನರು ಆಳರಸರ ಭಾಷೆಯಾದ ಉರ್ದುವಿನೊಂದಿಗೆ ಸೆಣಸಬೇಕಾಗಿತ್ತು. ಅಲ್ಲಿನ ಮತ್ತೊಂದು ಭಾಗ ಮದರಾಸು ಆಧಿಪತ್ಯಕ್ಕೂ ಇನ್ನೂ ಒಂದು ಭಾಗ ಮಹಾರಾಷ್ಟ್ರಕ್ಕೆ ಸೇರಿದ್ದು ಮರಾಠೀ ಜನರ ಆಕ್ರಮಣಕಾರಿ ಸ್ವಭಾವದಿಂದಾಗಿ ತನ್ನ ಅಸ್ತಿತ್ವಕ್ಕಾಗಿ ಹೋರಾಡಬೇಕಾದ ಸ್ಥಿತಿಯಿತ್ತು. ಈಗಿನ ಧಾರವಾಡ, ವಿಜಾಪುರ, ಬೆಳಗಾಂವಿ ಜಿಲ್ಲೆಗಳನ್ನ ದಕ್ಷಿಣ ಮಹಾರಾಷ್ಟ್ರವೆಂದೇ ಕರೆಯಲಾಗಿದ್ದು, ಕನ್ನಡವು ಹೋರಾಡಲು ಸಾಧ್ಯವಿಲ್ಲದಂತಹ ನಿತ್ರಾಣ ಸ್ಥಿತಿಯಲ್ಲಿತ್ತು. ದಕ್ಷಿಣ ಕನ್ನಡದ ದಕ್ಷಿಣ ಭಾಗ ಕೇರಳದ ಆಡಳಿತಕ್ಕೆ ಸೇರಿತ್ತು. ಅಲ್ಲಿ ಮಲಯಾಳಂ ಪ್ರಬಲವಾಗಿತ್ತು. ಉತ್ತರ ಕನ್ನಡ ಜಿಲ್ಲೆ ಮುಂಬಯಿ ಪ್ರಾಂತಕ್ಕೆ ಸೇರಿತ್ತು. ಇಂತಹ ಪರಿಸ್ಥಿತಿಯಲ್ಲಿ ಕನ್ನಡ ವಾಹಿನಿಯು ಸಂಪೂರ್ಣವಾಗಿ ಇಂಗಿ ಹೋಗದಿದ್ದುದೇ ದೊಡ್ಡ ಸಾಧನೆಯಾಯಿತು ಎಂದು ಹೇಳಬೇಕು.

ಕ್ರಿ. ಶ. ೧೮೫೭ ರಲ್ಲಿ ನಡೆದ ಸಿಪಾಯಿ ದಂಗೆಯು ಭಾರತಾದ್ಯಂತ ಸಾಮಾನ್ಯ ಜನರಲ್ಲಿಯೂ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಣೆಯನ್ನು ನೀಡಿರಬೇಕು. ಆ

ವೇಳೆಯಲ್ಲಿ ಉತ್ತರ ಕರ್ನಾಟಕದಲ್ಲೂ ಜನರ ರಕ್ತ ಕುದಿದು ಅವರಲ್ಲಿ ಕೆಲವರಾದರೂ ಕಾವ್ಯ ರಚನೆಗೆ ತೊಡಗಿದರು. ತಮ್ಮ ಅಸ್ತಿತ್ವಕ್ಕಾಗಿ, ಕನ್ನಡಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ರೋಷ, ದ್ವೇಷ, ಹರ್ಷಗಳೆಲ್ಲ ಲಾವಣಿಗಳ ರೂಪದಲ್ಲಿ ವ್ಯಕ್ತವಾದವು.

ಸ್ವಾತಂತ್ರ್ಯ ಕುರಿತು ಹೊರಬಂದ ಕವಿತೆಗಳ ಸಂಖ್ಯೆ ಕಡಿಮೆಯಾದರೂ ಧರ್ಮ, ಆಧ್ಯಾತ್ಮಗಳನ್ನು ತುಂಬಿಕೊಂಡಂತಹ ಕಾವ್ಯಗಳು, ಹಾಡುಗಳು ಹೆಚ್ಚಿನ ಸಂಖ್ಯೆಯಲ್ಲಿ ರಚಿತವಾಗಿವೆ. ಅಂತಹ ಅನುಭಾವಿಗಳ ಅಗ್ರಪಂಕ್ತಿಯಲ್ಲಿ ಎದ್ದು ನಿಲ್ಲುವ ಒಂದು ವ್ಯಕ್ತಿತ್ವ ಸಂತ ಶಿಶುನಾಳ ಶರೀಫ ಸಾಹೇಬರು. ತಮ್ಮ ಅಂತರಂಗದ ಅನುಭಾವಕ್ಕೆ ಅಪೂರ್ವವಾದ ರೀತಿಯಲ್ಲಿ ಅವರು ಅಭಿವ್ಯಕ್ತಿ ನೀಡಿದ್ದಾರೆ. ಪ್ರಾಸ, ಅನುಪ್ರಾಸಗಳ ಅಚ್ಚುಕಟ್ಟಿನಲ್ಲಿ ಜನಸಾಮಾನ್ಯರಿಗೆ ಮುಟ್ಟಿಸುವ ಉತ್ಸುಕತೆಯಲ್ಲಿ ಹೊಸತನವನ್ನ ತಂದಿರುವುದು ಇಲ್ಲಿನ ವೈಶಿಷ್ಟ್ಯ. ಆ ಅವಧಿಯಲ್ಲಿ ಕೇವಲ ಅನುಭಾವಿಗಳ ಹೆಸರನ್ನು ಹೇಳಿ ತೃಪ್ತಿಪಡಬೇಕಾದದ್ದಿದೆ. ಪಂಚಾಕ್ಷರಿ ನೀರಲಕೇರಿ, ನರಸಿಂಹ ನಂದ್ಯಾಳ ಸರ್ದಿ, ಶ್ರೀನಿವಾಸ ತೀರ್ಥ, ಶ್ರೀನಿವಾಸದಾಸ (ಸ. ೧೮೬೫), ಐಹೊಳೆಯ ವೆಂಕಟೇಶ, ಕೋಳಿವಾಡದ ಹುಲಗಪ್ಪ ಭವತಾರಕನೆಂದೇ ಪ್ರಸಿದ್ಧಿ ಪಡೆದ ನರಸಪ್ಪ ಕುಲಕರ್ಣಿ ಮುಂತಾದವರು ಕಾವ್ಯರಚನೆ ಮಾಡಿದರು.

ಕ್ರಿ.ಶ. ಸುಮಾರು ೧೮೫೦ ರ ವೇಳೆಗೆ ಸಂಸ್ಕೃತ ನಾಟಕಗಳ ಅನುವಾದಗಳು ನಡೆದವು. ಕಾವ್ಯಮಯುವಾದ ನಾಟಕಗಳ ಅನುವಾದದಲ್ಲಿ ಈ ಅನುವಾದಕರ ಕಾವ್ಯ ಶಕ್ತಿ ಅಲ್ಲಲ್ಲಿ ಮಿಂಚಿರುವುದು ಕಂಡುಬರುತ್ತದೆ.

ಕನ್ನಡದ ಉದಯದ ಕಾಲದಲ್ಲಿ, ಕನ್ನಡವು ಕನ್ನಡಿಗರಿಂದಲೇ ಉಪೇಕ್ಷಿತವಾಗಿದ್ದ ಕಾಲದಲ್ಲಿ ಅತ್ಯಂತ ಕಾಳಜಿಯಿಂದ ಮನೆಮನೆಗೆ ತಿರುಗಿ ಕನ್ನಡವನ್ನ ಬೆಳೆಸಿದ ಕೀರ್ತಿ ಶಾಂತಕವಿಗಳಿಗೆ ಸಲ್ಲುತ್ತದೆ. ಯಾವ ದೃಷ್ಟಿಯಿಂದ ವಿಚಾರ ಮಾಡಿದರೂ "ಮಹಾಕವಿ" ಅನ್ನುವಷ್ಟರ ಮಟ್ಟಿಗೆ ಕೃತಿಗಳನ್ನು ರಚಿಸಿದರು. ಮನೆ ಮನೆಗೆ ತಿರುಗಿದ್ದಕ್ಕೆ ಸಾಕ್ಷಿಯನ್ನು ಈ ನಾಲ್ಕು ಸಾಲುಗಳು ಹೇಳುತ್ತಿವೆ.

ಚಿನ್ನದ ಕಡಗದ ಕೈ ಕಾಸನಿತ್ತಿತು। ರನ್ನದುಂಗುರದ ಕೈ ಇಲ್ಲೆಂದಿತು। ಹೊನ್ನ ವಂಕಿಯ ಕೈ ಸುಮ್ಮನೆ ಕುಳಿತಿತು। ಆದರೆ ಬಡತನದ ಇನ್ನೊಂದು ಬಳಗೈ ಹಣ ಕೊಟ್ಟಿತು.

"ಮುಂಬೆಳಗಿನ ಕವಿಗಳಲ್ಲಿ" ಕನ್ನಡದ ಕಣ್ವರೆಂದೇ ಖ್ಯಾತಿವೆತ್ತ ಪ್ರೊ. ಬಿ. ಎಂ. ಶ್ರೀಕಂಠಯ್ಯನವರು ಇಂಗ್ಲೀಷ್ ಪ್ರಾಧ್ಯಾಪಕರಾಗಿ ಅಸಾಧಾರಣ ಪಾಂಡಿತ್ಯವನ್ನು ಹೊಂದಿದ್ದವರು. ಕನ್ನಡ, ಇಂಗ್ಲಿಷ್, ಸಂಸ್ಕೃತ ತಮಿಳುಗಳನ್ನು ಆಳವಾಗಿ ಅಧ್ಯಯನ ಮಾಡಿ ಕನ್ನಡಕ್ಕೆ ಸತ್ವಪೂರ್ಣ ಕಾಣಿಕೆಯನ್ನು ನೀಡಿದವರು. ಇವರ 'ಇಂಗ್ಲಿಷ್ ಗೀತಗಳು' ಕನ್ನಡ ಸಾಹಿತ್ಯಕ್ಕೆ ನೀಡಿದ ಅಪೂರ್ವಕೊಡುಗೆಯಾಗಿದೆ. ಷೆಕ್ಸಪೀಯರ್

ವರ್ಡ್ಸ್‌ವರ್ತ್, ಬಿ. ಷೆಲ್ಲಿ । ಹುಡ್, ಜಾನ್‌ಕೀಟ್ಸ ಹೀಗೆ ಹಲವಾರು ಇಂಗ್ಲಿಷ್ ಖ್ಯಾತ ಕವಿಗಳ ಕವನಗಳನ್ನು ಮೂಲ ಆಶಯಕ್ಕೆ ಭಾವಕ್ಕೆ ತೊಂದರೆ ಆಗದಂತೆ ಕನ್ನಡ ಅನುವಾದಿಸಿದ್ದು ಮಹತ್ಕಾರ್ಯವೆಂದೇ ಹೇಳಬೇಕು.

ಉದಾ : ನ್ಯಾಷ್ ಕವಿಯ ''Spring'' ಕವನದ ಅನುವಾದ ನೋಡಬಹುದಾಗಿದೆ.

Spring the sweet Spring is the year's pleasant King then blooms each thing than maids dance a arings cold doth not sting the pletly the birds do sing cuckoo jug-jug pu-we, to will woo !

ಕನ್ನಡ ಅನುವಾದ–

ವಸಂತ ಬಂದ ಋತುಗಳ ರಾಜ ತಾ ಬಂದ
ಚಿಗುರನು ತಂದ ಹೆಣ್ಗಳ ಕುಣಿಸುತ ನಿಂದ
ಚಳಿಯನು ಕೊಂದ ಹಕ್ಕಿಗಳುಲಿಗಳ ಚೆಂದ
ಕುವ್ವೂ ಜಗ್ ಜಗ್, ಪುವ್ವೀ, ಟೂವಿಟ್ಟೂವೂ !

ಈ ಬಗೆಯ ಕವನಗಳಲ್ಲಿ ಭಾವ ಮಾಧುರ್ಯದೊಂದಿಗೆ ಗೇಯತೆಯ ಸಿದ್ಧಿ ಶ್ರೀಯವರಿಗೆ ಆಗಿದೆ ಎನ್ನುವುದರಲ್ಲಿ ಸಂದೇಹವಿಲ್ಲ, "ಕನ್ನಡದ ಜಾಯಮಾನವನ್ನು ಮೀರದೆ ಎಷ್ಟರ ಮಟ್ಟಿಗೆ ಛಂದಸ್ಸು ಇಂಗ್ಲೀಷ ಛಂದಸ್ಸುಗಳನ್ನು ಹೋಲಬಹುದೋ ಅಷ್ಟರ ಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವಲ್ಲಿ ಶ್ರೀಯವರು ಪಟ್ಟ ಪ್ರಯತ್ನ ಶ್ಲಾಘನೀಯ.

ಶ್ರೀಯವರ ಸಮಕಾಲೀನರಲ್ಲಿ ಪ್ರಮುಖರಾದವರೆಂದರೆ ಡಿ. ವಿ. ಜಿ. ಯವರು. ಕಾಲೇಜಿನ ಮೆಟ್ಟಿಲನ್ನೇ ಏರದೇ ಅಸಾಧಾರಣ ವಿದ್ವತ್ತನ್ನು ಗಳಿಸಿ ಕನ್ನಡ ಕಾವ್ಯ ಕ್ಷೇತ್ರವನ್ನ ಸಮೃದ್ಧಿಗೊಳಿಸಿದವರು. ಅವರ ಕವನಗಳಲ್ಲಿ ನಡುಗನ್ನಡದ ಛಾಯೆಯಿದೆ.

ಕುವೆಂಪುರವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪ್ರಪ್ರಥಮ ಜ್ಞಾನಪೀಠವನ್ನು ತಂದು ಕೊಟ್ಟ ರಸಋಷಿ, ದೈತ್ಯ ಪ್ರತಿಭೆಯ ಈ ವ್ಯಕ್ತಿಯ ವ್ಯಕ್ತಿತ್ವ ವಿಶಿಷ್ಠ ಬಗೆಯದು. "ಸಂಪೂರ್ಣ ರಾಮಾಯಣ ದರ್ಶನಂ" ನಂತಹ ಬೃಹತ್ ಕೃತಿ ಕನ್ನಡಕ್ಕೆ ಬರುವಾಗ ದ್ರಾವಿಡ ತಪಸ್ಸನ್ನೇ ಆಚರಿಸಿರಬೇಕು.

ಯಾವ ಭಾಷೆಯೂ ತನಗೆ ತಾನೇ ಅಸಮರ್ಥವಲ್ಲ, ಸಮರ್ಥನೊಬ್ಬನು ಬರುವ ತನಕ ಮಾತ್ರ ಅದು ಅಸಮರ್ಥವೆಂದು ತೋರಬಹುದು ಎನ್ನುವ ಐರಿಷ ಕಸಿನ್ಸ್ ಅವರ ಮಾತು ಎಷ್ಟೊಂದು ಅರ್ಥಗರ್ಭಿತ...!

ಕುವೆಂಪು, ಪು. ತಿ. ನರಸಿಂಹಾಚಾರ್ಯ ಮುಂತಾದವರು ಪ್ರತಿನಿಧಿಸುವ ವರ್ಣನಾತ್ಮಕ ಹಾಗೂ ಕಥನಾತ್ಮಕ ಕಾವ್ಯ ಮಾರ್ಗ ಹಾಗೂ ಬೇಂದ್ರೆ, ಮಧುರ ಚೆನ್ನ

ಅವರು ಪ್ರತಿನಿಧಿಸುವ ಭಾವಗೀತಾತ್ಮಕ ಮಾರ್ಗ ನವೋದಯ ಕಾವ್ಯ ತನ್ನ ಶಿಖರವನ್ನು ಕಂಡಿತು.

ಶ್ರೀ ರಾಮಾಯಣ ದರ್ಶನಂದಲ್ಲಿ ಪ್ರತಿಯೊಂದು ಪಾತ್ರಕ್ಕೂ ಅದರ ಉದ್ಧಾರದ ಬಾಗಿಲು ಸದಾ ತೆರೆದೇ ಇರುವುದನ್ನು ಕುವೆಂಪು ಅವರ ಸಾಮಾಜಿಕ ನಿಲುವುಗಳ ಹಿನ್ನೆಲೆಯಲ್ಲಿ ನೋಡಬಹುದಾಗಿದೆ, ಕುವೆಂಪು ಅವರು ವ್ಯವಸ್ಥೆಯನ್ನು ಗ್ರಹಿಸುವದು ಶೋಷಿತರ ನೆಲೆಯಿಂದ. ಅವರ ಭಾವ-ಗೀತೆಗಳಲ್ಲಿ ಪುರೋಹಿತ ಶಾಹಿಯ ಹಾಗೂ ಸಾಂಸ್ಥಿಕ ಧರ್ಮದ ಉಗ್ರ ನಿರಾಕರಣೆ ಮತ್ತೆ ಮತ್ತೆ ಕೇಳುವ ಆಶಯ. ತಮ್ಮ ಬರವಣಿಗೆಯ ಉದ್ದಕ್ಕೂ ಮಹತ್ವವನ್ನೇ ಅನ್ವೇಷಿಸಿಕೊಂಡು ಹೋದ ಕುವೆಂಪು ಇಂದ್ರಿಯಗಮ್ಯ ಅನುಭವದ ನೆಲೆಯಲ್ಲೇ ನಿಲ್ಲಲಾರರು. ಇಂತಹ ಅನಭವವನ್ನು ದಾಟುವ ಆಧ್ಯಾತ್ಮಿಕ ಸೆಳೆತ ಅವರಲ್ಲಿ ತೀವ್ರವಾಗಿದೆ. ಅವರ ಪಕ್ಷಿಕಾಶಿ ಕವನ ಸಂಕಲನದ "ಬಾ ಫಾಲ್ಗುಣ ರವಿ ದರ್ಶನಕೆ" ಎನ್ನುವ ಕವನ ಇದಕ್ಕೆ ಉದಾಹರಣೆಯಾಗಿದೆ.

ಬೇಂದ್ರೆ ಕಾವ್ಯ ಭಾವಗೀತಾತ್ಮಕ ಶೈಲಿಯಿಂದ ಕೂಡಿದ್ದರೂ ವಾಸ್ತವವನ್ನು ಬಿಟ್ಟಿಲ್ಲ. ಬದುಕನ್ನು ಆಳವಾಗಿ ನೋಡಿದ ಅವರ ಕವನಗಳು ಆಧ್ಯಾತ್ಮವನ್ನ ಸಚೇತನವಾಗಿ ನಿರ್ಧರಿಸುತ್ತವೆ. ಅಂದರೆ ಆಧ್ಯಾತ್ಮಿಕತೆಯು ಒಂದು ಎಳೆ ಬೇಂದ್ರೆಯವರಲ್ಲಿ ನಿರಂತರವಾಗಿ ಇದ್ದೇ ಇದೆ.

ಒಟ್ಟಿನಲ್ಲಿ ನವೋದಯದ ವೇಳೆಯಲ್ಲಿ ಪ್ರಗಾಢ, ಶೋಕ ಕಾವ್ಯ, ಖಂಡ ಕಾವ್ಯದಂತಹ ಹೊಸ ಪ್ರಕಾರಗಳು ಕನ್ನಡದಲ್ಲಿ ಅವತರಿಸಿದವು. ಕಥನದ ಓಟಕ್ಕೆ ಸರಳ ರಗಳೆಯು ಛಂದಸ್ಸು ಚೆನ್ನಾಗಿ ಹೊಂದುತ್ತದೆಂದು ಕಂಡುಕೊಂಡಿದ್ದು ಈ ಅವಧಿಯಲ್ಲೇ. ಹಾಡು, ಕಥನ, ಗದ್ಯ, ಅರ್ಥ, ಛಂದಸ್ಸು ಈ ಎಲ್ಲ ಬಂಧನಗಳನ್ನೂ ಬಿಡಿಸಿಕೊಂಡು, ಮಾನವ ಕೇಂದ್ರಿತ, ವ್ಯಕ್ತಿ ಪ್ರಧಾನ, ಅಂತರ್ಮುಖಿ ಬರಿಯ ಭಾವಗೀತದ ಅನ್ವೇಷಣೆ ಆರಂಭವಾಯಿತು. ಹೊಸ ಕಾವ್ಯದ ಕುರಿತ ಸೈದ್ಧಾಂತಿಕ ಚರ್ಚೆಗಳು ಮಾಸ್ತಿ, ತೀ. ನಂ. ಶ್ರೀ ಡಿ. ವಿ. ಜಿ., ಬೇಂದ್ರೆ ವಿ. ಸೀ. ಗೋವಿಂದ ಪೈ ಮುಂತಾದವರ ಬರಹಗಳಲ್ಲಿ ಕಂಡು ಬರುವವು.

— **ಮೂಡ್ಗೇರಿ ಡಿ. ಎನ್. ನಾಯಕ**
ಕನ್ನಡ ಉಪನ್ಯಾಸಕರು

# ವರದಕ್ಷಿಣೆ ಜಾತಿಪದ್ಧತಿ ಶಾಪ
# ಪ್ರೇಮ ವಿವಾಹದಿಂದ ವಿಮೋಚನೆ

ಸಮಾಜದಲ್ಲಿ ತಲೆದೋರುತಿರುವ ಅತೀದೊಡ್ಡ ಪಿಡುಗಾದ ವರದಕ್ಷಿಣೆ, ಜಾತಿ ಸಮಸ್ಯೆಯನ್ನು ಬುಡ ಸಮೇತ ನಿರ್ಮೂಲನೆಗೊಳಿಸಬಲ್ಲ ಶಕ್ತಿ ನಿಶ್ಚಿತವಾಗಿ ಪ್ರೇಮ ವಿವಾಹಕ್ಕಿದೆ. ಆದರೂ ಕೂಡ ಇಂದಿನ ಯುವಜನಾಂಗ ಇದರಿಂದ ವಿಮುಖರಾಗುತ್ತಿರುವದು ಆಶ್ಚರ್ಯಕರ ಸಂಗತಿಯಾಗಿದೆ. ಯೌವನದಲ್ಲಿ ಸಾಮಾನ್ಯವಾಗಿ ಎಲ್ಲರೂ ಪ್ರೇಮಕ್ಕೆ ಸಿಲುಕುವದು ಸಹಜ. ಆದರೆ ಅದರಲ್ಲಿ ಮುಂದೆ ಬರುವ ಕಷ್ಟಗಳನ್ನು ಎದುರಿಸುವಂತಹ ಧೈರ್ಯಶಾಲಿಗಳು ಅಲ್ಪ. ಇಂತಹ ಧೈರ್ಯಶಾಲಿಗಳು ವಿವಾಹಕ್ಕೆ ಸಜ್ಜಾಗುತ್ತಾರೆ. ಉಳಿದವರು ತಮ್ಮ ಹಣೆ ಬರಹವನ್ನು ಹೇಳಿಕೊಂಡು ಬ್ರಹ್ಮನ ಮೇಲೆ ಗೂಬೆ ಕೂರಿಸಿ ಸುಮ್ಮನಾಗುತ್ತಾರೆ.

ತೀವ್ರ ಬದಲಾವಣೆ ಹೊಂದುತ್ತಿರುವ ಇಂದಿನ ಸಾಮಾಜಿಕ ಸನ್ನಿವೇಶದಲ್ಲಿ ಶಾಲಾ ಕಾಲೇಜುಗಳಲ್ಲಿ, ಔದ್ಯೋಗಿಕ ರಂಗದಲ್ಲಿ ಗಂಡು ಹೆಣ್ಣು ಎನ್ನುವ ವ್ಯತ್ಯಾಸ ಅಷ್ಟಾಗಿ ಉಳಿದಿಲ್ಲ, ಕೆಲವು ಕ್ಷೇತ್ರಗಳಲ್ಲಿಯೂ ಮಹಿಳೆ ಮತ್ತು ಪುರುಷ ಉದ್ಯೋಗಿಗಳು ಹಗಲು ರಾತ್ರಿ ಒಟ್ಟಾಗಿ ದುಡಿಯುವ ಅನಿವಾರ್ಯತೆ ಒದಗಿ ಬಂದಿದೆ. ಇಂತಹದರಲ್ಲಿಯೂ ಗಂಡು ಹೆಣ್ಣುಗಳು ಅರೇಂಜ್ ಮದುವೆಗೆ ಶರಣಾಗುತ್ತಿರುವದು ಅವರ ಸಾಂಪ್ರದಾಯಿಕತೆಯನ್ನು ಎತ್ತಿ ತೋರಿಸುತ್ತದೆ ಎನ್ನುವದನ್ನು ನಾವು ತಿಳಿದುಕೊಳ್ಳಬಹುದು.

ವೃತ್ತಿ ಜೀವನಕ್ಕೆ ಯುವ ಜನಾಂಗ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಿರುವದರಿಂದ ಹಾಗೂ ಕೌಟುಂಬಿಕ ಜೀವನದ ಭದ್ರತೆಯ ದೃಷ್ಟಿಯಿಂದ ಪ್ರೇಮ ವಿವಾಹದತ್ತ ಅವರು ಹಿಂಜರಿಕೆ ತೋರುತ್ತಿದ್ದಾರೆ. ಮತ್ತು ಯುವಕ/ತಿ ನಾನು ನಿನ್ನನ್ನು ಪ್ರೀತಿಸುತ್ತಿರುವೆ ಬಂದು ಹೇಳಿ ಬಣ್ಣದ ಮಾತುಗಳನ್ನಾಡಿ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ. ನಂತರ ಕೈಬಿಟ್ಟು ಬೇರೊಬ್ಬರ ಜೊತೆ ಜೀವನ ನಡೆಸುತ್ತಾರೆ. ಇದರಿಂದಾಗಿ ಯುವಕ/ತಿ ಹುಚ್ಚರಾಗಿ ಅಲೆಯುತ್ತಾರೆ. ಇಂತಹ ಅನೇಕ ನಿದರ್ಶನಗಳನ್ನು ಕಂಡ ಇಂದಿನ ಯುವಜನಾಂಗ ಪ್ರೇಮ ವಿವಾಹದತ್ತ ಹಿಂಜರಿಕೆ ತೋರುತ್ತಿರುವದಕ್ಕೆ ಪ್ರಮುಖ ಕಾರಣವಾಗಿದೆ. ಪ್ರೇಮ ವಿವಾಹ ಎಂದ ಕೂಡಲೇ ಮೊದಲು ತಲೆದೋರುವದು ಜಾತಿ ಸಮಸ್ಯೆ. ಜಾತಿ ಇಲ್ಲದಿದ್ದರೆ

ಮನುಷ್ಯ ಬದುಕಲಾರನೋ ಎನ್ನುವಷ್ಟರ ಮಟ್ಟಿಗೆ ನಮ್ಮೆಲ್ಲರ ಮನಸ್ಸಿನಲ್ಲಿ ಇದು ಬೇರುಬಿಟ್ಟಿದೆ. ಯಾವುದೇ ಮೇಲು ಜಾತಿಯ ವ್ಯಕ್ತಿ ಕಾಯಿಲೆಗೆ ಒಳಗಾದಾಗ ಅವನಿಗೆ ರಕ್ತ ಅಥವಾ ಶರೀರದ ಉಳಿದ ಯಾವುದಾದರೂ ಭಾಗಗಳು ಅವಶ್ಯವಿದ್ದರೆ ಅದು ಯಾವ ಜಾತಿಯ ವ್ಯಕ್ತಿಯದಾದರೂ ಆಗಬಹುದು. ಆದರೆ ವೈವಾಹಿಕ ಸಂಬಂಧವನ್ನು ಬೆಳೆಸುವಾಗ ಜಾತಿಯ ಸಮಸ್ಯೆ ಉಂಟಾಗುತ್ತದೆ. ಈ ವೈಜ್ಞಾನಿಕ ಯುಗದಲ್ಲಿ ಜಾತಿಯನ್ನು ಬಿಟ್ಟರೆ ಯಾವ ಜಗತ್ತೂ ಮುಳುಗಿ ಹೋಗುವುದಿಲ್ಲ ಎನ್ನುವದು ನಮ್ಮ ಹಿರಿಯರ ಮನಸ್ಸಿಗೆ ಮೊದಲು ಬರಬೇಕು.

ಯುವಕ/ತಿ ತಾನು ಪ್ರೀತಿಸುತ್ತಿರುವ ಹುಡುಗ/ಗಿ ಬಗ್ಗೆ ತಂದೆ ಬಳಿ ಹೇಳಿದಾಗ ಅವರಿಂದ ಬರುವ ಮೊದಲ ಪ್ರಶ್ನೆಯೇ ಜಾತಿಯ ಕುರಿತು. ನಂತರ ಅಂತಸ್ತನ್ನು ರೂಪ, ವಿದ್ಯೆ, ಜಾತಿ ಬೇರೆಯಾಗಿದ್ದರೆ ಸಮಾಜದ ಅಂಜಿಕೆ ಅವರನ್ನು ಹಿಂಜರಿಯುವಂತೆ ಮಾಡುತ್ತದೆ. ನೀನು ಅವಳನ್ನು ಮದುವೆಯಾದರೆ ಸಮಾಜ ಏನೆನ್ನಬಹುದು ಎನ್ನುವ ಬುದ್ಧಿವಂತ ಪ್ರಶ್ನೆಯೊಂದಿಗೆ ಪಾಲಕರು ನುಣುಚಿ ಕೊಳ್ಳಲು ಪ್ರಯತ್ನ ಮಾಡುತ್ತಾರೆ.

ಕಥೆ, ಕಾದಂಬರಿ, ಸಿನಿಮಾ, ಟಿ. ವಿ. ಧಾರಾವಾಹಿಗಳಲ್ಲಿ ಬರುವ ಪ್ರೇಮ ದೃಶ್ಯಗಳನ್ನು ಆಸಕ್ತಿಯಿಂದ ವೀಕ್ಷಿಸಿ. ಅಷ್ಟೇ ಕುತೂಹಲದಿಂದ ಅವುಗಳನ್ನು ಕುರಿತು ಚರ್ಚಿಸುವ ಪಾಲಕರು ತಮ್ಮ ಮಕ್ಕಳ ವಿಚಾರ ಬಂದಾಗ ಮಾತ್ರ ತುಂಬಾ ಜಾಣರಾಗಿ ಬಿಡುತ್ತಾರೆ. ಬೇರೆಯವರ ಮಕ್ಕಳ ಬಗ್ಗೆ ವಿನಾಯತಿ ತೋರಿದರೂ ಈ ವಿಷಯದಲ್ಲಿ ತಮ್ಮ ಮಕ್ಕಳನ್ನು ಎಂದೂ ಕ್ಷಮಿಸಲು ಸಿದ್ಧರಿರುವದಿಲ್ಲ. ಪಾಲಕರು ತಮ್ಮ ಬಲವಂತದಿಂದ ತಮ್ಮ ಇಚ್ಛೆಯ ಹುಡುಗಿಯನ್ನು ಮದುವೆ ಮಾಡಲು ಪ್ರಯತ್ನಿಸುತ್ತಾರೆ. ಮನೆಯವರನ್ನು ಎದುರಿಸಿ ಮದುವೆಯಾದ ದಂಪತಿಗಳು ಕೆಲವು ಕಾಲ ಅವರಿಂದ ದೂರವಿದ್ದರೂ ಕೂಡ ಒಂದು ಮಗು ಜನಿಸಿದ ಕೂಡಲೇ ಹಿಂದಿನದೆಲ್ಲವನ್ನೂ ಮರೆತು ಪುನಃ ಒಂದಾಗಿ ಸುಖ ಜೀವನವನ್ನು ನಡೆಸುತ್ತಿರುವ ಸಾಕಷ್ಟು ನಿದರ್ಶನಗಳನ್ನು ನಾವು ಇಂದು ನೋಡಬಹುದಾಗಿದೆ. ಅಪ್ಪ ನೆಟ್ಟ ಆಲದ ಮರಕ್ಕೆ ನೇಣು ಹಾಕಿಕೊಳ್ಳಬೇಡ ಎಂಬ ಗಾದೆಯಂತೆ ಯುವ ಜನತೆ ಹಳೆಯದನ್ನು ಬಿಟ್ಟು ಹೊಸತನವನ್ನು ರೂಢಿಸಿಕೊಳ್ಳಬೇಕು. ಅಂದರೆ ಪ್ರೇಮ ವಿವಾಹಕ್ಕೆ ಸನ್ನದ್ಧರಾಗಬೇಕು.

ಯುವ ಜನಾಂಗ ಮುಂದೆ ಬರುವ ಸಮಸ್ಯೆಗಳನ್ನು ಎದುರಿಸಲು ಧೈರ್ಯ ಸಾಲದೇ ಭದ್ರತೆಗಾಗಿ ಪ್ರೇಮ ವಿವಾಹಕ್ಕೆ ಹಿಂಜರಿಯುತ್ತಾರೆ. ಇದಕ್ಕೆ ಆರ್ಥಿಕ ಭದ್ರತೆಯಿಲ್ಲದಿರುವದೂ ಒಂದು ಮುಖ್ಯ ಕಾರಣವಾಗಿರಬಹುದು. ಪ್ರೇಮ ವಿವಾಹ ಬಡವರ ಹಿತದೃಷ್ಟಿಯಿಂದ ಉತ್ತಮವಾಗಿದೆ. ಪ್ರೇಮ ವಿವಾಹಕ್ಕೆ ಹಲವಾರು ಅಡೆ

ತಡೆಗಳು ಇರಬಹುದು. ಆದರೆ ಧೈರ್ಯದಿಂದ ಮುನ್ನುಗ್ಗಿದಲ್ಲಿ ಜಯ ಖಂಡಿತ ವಾಗಿಯೂ ದೊರೆಯುತ್ತದೆ. ಸಮಾಜದಲ್ಲಿ ಜಾತಿ ಸಮಸ್ಯೆ ವರದಕ್ಷಿಣೆಯಂಥ ಪಿಡುಗುಗಳನ್ನು ಬುಡ ಸಮೇತ ನಿರ್ಮೂಲನೆಗೊಳಿಸಲು ಇದೊಂದೇ ದಾರಿ. ಪ್ರೇಮ ವಿವಾಹವನ್ನು ಅನುಸರಿಸುವದರಿಂದ ಅನೇಕ ಬಡ ಹುಡುಗಿಯರ ಮತ್ತು ಬಡ ಕುಟುಂಬಗಳ ಆತ್ಮಹತ್ಯೆ ಅವರ ಗೋಳನ್ನು ನಿರ್ಮೂಲನೆ ಮಾಡಬಹುದು. ಪಾಶ್ಚಾತ್ಯ ಸಂಸ್ಕೃತಿಗೆ ಬೇಗ ಮರುಳಾಗುವ ನಮ್ಮ ಜನ ಈ ವಿಷಯದಲ್ಲಿ ಮಾತ್ರ ಏಕೆ ಮೀನಮೇಷ ಎಣಿಸುತ್ತಿದ್ದಾರೆ ಎನ್ನುವದು ಕಗ್ಗಂಟಾಗಿರುವ ವಿಷಯವಾಗಿದೆ.

— **ಮಹೇಶ ವಿ. ನಾಯ್ಕ**
II ಪಿ. ಯು. ಸಿ,

---

**ಪತ್ರೆ**

ಶನಿದೇವನಿಗೆ ಪ್ರಿಯವಂತೆ ಶಮೀ ಪತ್ರೆ
ವಿಷ್ಣುವಿಗೆ ಪ್ರಿಯವಂತೆ ತುಲಸಿ ಪತ್ರೆ
ಈಶ್ವರನಿಗೆ ಪ್ರಿಯವಂತೆ ಬಿಲ್ವ ಪತ್ರೆ
ಯಮನಿಗೆ ಪ್ರಿಯವಂತೆ ಸರಕಾರಿ ಆಸ್ಪತ್ರೆ

**ಉತ್ತರ**

ಟಿ.ವಿಯಲ್ಲಿ ನಡೆದಿತ್ತು ಕ್ವಿಜ್
ಚಿತ್ರ ತೋರಿಸಿ ಪ್ರಶ್ನೆ ಕೇಳಿದ ಜಡ್ಜ
Name the president of America?
ನೋಡುತ್ತ ಕುಳಿತಿದ್ದ ನಮ್ಮ ಪುಟ್ಟ
ತಟ್ಟನೆದ್ದು ಉತ್ತರ ಕೂಗೇ ಬಿಟ್ಟ
Oh! boy friend of Monica

**ಕಿರಿಕಿರಿ**

ಸಿಟ್ಟಿಗೆದ್ದು ಕೂಗಿತು ಮೌಂಟ್ ಎವರೆಸ್ಟ್
ಈ ಪರ್ವತಾರೋಹಿಗಳ ಕಿರಿ ಕಿರಿಯಿಂದಾಗಿ
I have no rest.

— ರಚನೆ : **ಸುನೀತಾ ಎಸ್. ಪಟಗಾರ**
ದ್ವಿತೀಯ ಪಿ. ಯು. ಸಿ.

# ಭಯೋತ್ಪಾದನೆ

ಭಯೋತ್ಪಾದನೆ ಮಾನವ ಕುಲಕ್ಕಂಟಿದ ಶಾಪ. ನಾಗರಿಕ ಸಮಾಜ ನೆಮ್ಮದಿಯಿಂದಿರಲು ಇದು ಬಿಡದ ಅಡ್ಡಗೋಡೆ. ಭಯೋತ್ಪಾದನೆ ಒಂದು ಬಹುರೂಪಿ ರಾಕ್ಷಸ. ಇದರ ಉದ್ದೇಶ ಮಾನವತೆಯನ್ನು ಹೊಸಕಿ ಹಾಕುವುದು. ಧರ್ಮ, ಜನಾಂಗ, ಜಾತಿ ಇತ್ಯಾದಿಗಳ ಸೋಗು ಹಾಕಿ ಮುಗ್ಧ ಜನರ ಮಾರಣಹೋಮ ಮಾಡುವುದಕ್ಕೆ ಇಲ್ಲಿ ಪ್ರಾಮುಖ್ಯತೆ. ಇದರಲ್ಲಿ ಬದುಕು–ಬದುಕಲು ಬಿಡು ಎಂಬುದರ ಬದಲಾಗಿ ಕೊಲ್ಲು–ಕೊಲ್ಲಲ್ಪಡು ಎಂಬುದಕ್ಕೆ ಪ್ರಾಧಾನ್ಯತೆ. ಇದೇ ಇದರ ಸಿದ್ಧಾಂತ.

"ಸರ್ಕಾರಗಳು, ಸಾರ್ವಜನಿಕರು ಅಥವಾ ವ್ಯಕ್ತಿಗಳ ವಿರುದ್ಧ ವ್ಯವಸ್ಥಿತ ಭಯ ಹಾಗೂ ಹಿಂಸೆಯನ್ನುಪಯೋಗಿಸುವುದರ ಮೂಲಕ ರಾಜಕೀಯ ಉದ್ದೇಶವನ್ನು ಸಾಧಿಸಲು ಪ್ರಯತ್ನಿಸುವುದೇ ಭಯೋತ್ಪಾದನೆ" ಎನ್ನುವುದು ಬ್ರಿಟಾನಿಕಾ ವಿಶ್ವಕೋಶ ಭಯೋತ್ಪಾದನೆಗೆ ನೀಡಿರುವ ವ್ಯಾಖ್ಯಾನ. ಭಯೋತ್ಪಾದನೆ ಕಾಲಮಾನಗಳ ಹಾಗೂ ದೇಶಗಳ ಗಡಿಗಳ ನಿರ್ಬಂಧವಿಲ್ಲ. ಅಮೇರಿಕಾದ ಯಾದವೀ ಕಲಹದ ನಂತರ ದಕ್ಷಿಣದವರು ಕ್ಲುಕ್ಸಕ್ಲಾನ್ ಎಂಬ ಸಂಘವನ್ನು ಕಟ್ಟಿಕೊಂಡರು. ದೇಶದ ಪುನರ್ನಿರ್ಮಾಣದಲ್ಲಿ ತೊಡಗಿದವರನ್ನು ಬೆದರಿಸುವುದು ಇದರ ಉದ್ದೇಶವಾಗಿತ್ತು. 1865 ರಿಂದ 1905 ರ ನಡುವೆ ಅನೇಕ ರಾಜರು, ಅಧ್ಯಕ್ಷರು, ಮಂತ್ರಿಗಳು ಇವರಿಂದ ಹತರಾದರು.

20 ನೇ ಶತಮಾನದಲ್ಲಿ ಉಂಟಾದ ತಂತ್ರಜ್ಞಾನದ ಕ್ರಾಂತಿ ಭಯೋತ್ಪಾದನೆಯನ್ನು ನಿಗ್ರಹಿಸಲು ಸಹಕಾರಿಯಾಗದೇ ಇದಕ್ಕೆ ಉತ್ತೇಜನ ನೀಡಿದ್ದು ಒಂದು ವಿಪರ್ಯಾಸ. ಅತ್ಯಾಧುನಿಕ ಆಯುಧಗಳು, ಬಾಂಬುಗಳು, ಸಂಪರ್ಕ ಉಪಕರಣಗಳಿಂದಾಗಿ ಭಯೋತ್ಪಾದನೆ ವಿಶ್ವದೆಲ್ಲೆಡೆ ವ್ಯಾಪಕವಾಗಿ ಹಬ್ಬಿತು. ಅಸ್ತಿತ್ವದಲ್ಲಿರುವ ಸರ್ಕಾರವನ್ನು ಅಸ್ಥಿರಗೊಳಿಸಲು ಭಯೋತ್ಪಾದನೆ ಒಂದು ಪ್ರಬಲ ಅಸ್ತ್ರವಾಯಿತು.

ಇಂದು ಭಯೋತ್ಪಾದನೆ ಒಂದು ರಾಷ್ಟ್ರಕ್ಕೆ ಸೀಮಿತವಾದ ಸಮಸ್ಯೆಯಲ್ಲ, ಇದೊಂದು ಜಾಗತಿಕ ವಿದ್ಯಮಾನ. ಮಾಧ್ಯಮಗಳ ಪ್ರಭಾವದಿಂದ ಭಯೋತ್ಪಾದನಾ ಕೃತ್ಯಗಳಿಗೆ ಹೆಚ್ಚಿನ ಪ್ರಚಾರ ದೊರೆಯುತ್ತಿದೆ. ಭಯೋತ್ಪಾದನೆಗೆ ಬಲಿಯಾಗುವವರಲ್ಲಿ ಹೆಚ್ಚಿನವರು ಮುಗ್ಧ ನಾಗರಿಕರು, ಉಗ್ರಗಾಮಿ ಸಂಘಟನೆಗಳು ಜನರಲ್ಲಿ ಭಯ ಬಿತ್ತುವುದಕ್ಕಾಗಿ ಅಪಹರಣ, ವಿಮಾನ ಅಪಹರಣ, ಬಾಂಬ ದಾಳಿಗಳ ಮೂಲಕ ಮುಗ್ಧರ ಮಾರಣ ಹೋಮದಲ್ಲಿ ತೊಡಗುತ್ತಾರೆ.

ಜರ್ಮನಿಯ ಬಾದರ್ ಮೋಫ್, ಜಪಾನಿನ ರೆಡ್ ಆರ್ಮಿ, ಇಟಲಿಯ ರೆಡ್ ಬ್ರಿಗೇಟ್ ಪ್ಯಾಲಿಸ್ಟೇನ್ ಉಗ್ರಗಾಮಿ ಸಂಘಟನೆಗಳು ಭಯೋತ್ಪಾದನೆಯ ಮುಂಚೂಣಿಯಲ್ಲಿವೆ. ಈಗ ಅಮೇರಿಕದ ಮೇಲಿನ ದಾಳಿಯೊಂದಿಗೆ ಭಯೋತ್ಪಾದನೆಯ ತಾಂಡವ ಆ ದೇಶಕ್ಕೆ ಪಸರಿಸಿದೆ. ಅಮೇರಿಕಾದಲ್ಲಿ ಭಯೋತ್ಪಾದಕರು ನಡೆಸಿದ ದಾಳಿ ಅಮೇರಿಕಾದ ಆರ್ಥಿಕ ವ್ಯವಸ್ಥೆಯ ಮೇಲೆ ಕರಿನೆರಳು ಬೀರಲಿದೆ ಎಂದು ಆರ್ಥಿಕ ವಿಶ್ಲೇಷಕರು ನುಡಿದಿದ್ದಾರೆ. ಇದರಿಂದ ಆತಂಕ ಸೃಷ್ಟಿಯಾಗಿದೆ.

ಅಮೇರಿಕಾದ ಮೇಲೆ ನಡೆದ ಭೀಕರ ದಾಳಿಗೆ ಯಾರು ಕಾರಣ ಎಂಬ ಜಿಜ್ಞಾಸೆಯಲ್ಲಿ ತೊಡಗಿರುವಾಗ ಶೇ. 90 ರಷ್ಟು ಅಮೇರಿಕಾದ ಅಧಿಕಾರಿಗಳು ಬೆರಳು ತೋರಿಸಿದ್ದು ಒಸಾಮಾ ಬಿನ್ ಲಾಡೆನ್‌ನ ಕಡೆಗೆ. ತೆಳುಕಾಯದ ಮಿತಭಾಷಿಯಾದ ಎತ್ತರದ ನಿಲುವಿನ ಲಾಡೆನ್ ಸದ್ಯ ಅಫಘಾನಿಸ್ತಾನದಲ್ಲಿದ್ದಾನೆ. 44 ವರ್ಷದ ಬಿನ್ ಲಾಡೆನ್ ಮೂಲತಃ ಸೌದಿ ಅರೇಬಿಯಾದವನು. ಆತ ಮೊದಲು ಸೋವಿಯತ್ ಅತಿಕ್ರಮಣದ ವಿರುದ್ಧ ಹೋರಾಡುತ್ತಿದ್ದ ಮುಂಜಾಹಿದೀನ್‌ಗಳಿಗೆ ನೆರವಾಗಲು ಧನಸಂಗ್ರಹದಲ್ಲಿ ತೊಡಗಿದ. ಅನೇಕ ಯೋಧರನ್ನು ತನ್ನ ಗುಂಪಿಗೆ ಸೇರಿಸಿಕೊಂಡು ಶಸ್ತ್ರಾಸ್ತ್ರ ತರಬೇತಿಯನ್ನು ನೀಡಿದ, ಇವನ ಉಗ್ರನೀತಿಯಿಂದಾಗಿ ಸೌದಿ ಅರೇಬಿಯಾ ಅವನ ನಾಯಕತ್ವವನ್ನು ಕಿತ್ತುಕೊಂಡು ಗಡೀಪಾರುಮಾಡಿತು.

ಭಯೋತ್ಪಾದನೆಗೆ ಯಾವುದೇ ರೀತಿಯ ಗಡಿಗಳಿಲ್ಲ. ಈಗ ಅದೊಂದ ಜಾಗತಿಕ ಪಿಡುಗು. ಸಪ್ಟೆಂಬರ 11 ನೇ ತಾರೀಕು ವಿಶ್ವವಾಣಿಜ್ಯ ಕಟ್ಟಡಗಳು ಹಾಗೂ ಪೆಂಟಗಾನ್ ಮೇಲಿನ ದಾಳಿ ಮೇಲಿನ ಅಂಶವನ್ನು ಸ್ಪಷ್ಟಪಡಿಸಿದೆ. ಭಯೋತ್ಪಾದನೆಯ ವಿರುದ್ಧದ ಹೋರಾಟ ಮಾಮೂಲಿ ಹೋರಾಟದಂತಲ್ಲ. ಅದಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ. ಸಪ್ಟೆಂಬರ 11 ರಂದು ಅಮೇರಿಕಾದ ಮೇಲಿನ ವೈಮಾನಿಕ ದಾಳಿ 1941 ರ ಪರ್ಲಹಾರ್ಬರ್ ದಾಳಿಯ ನಂತರದ ಅತ್ಯಂತ ದೊಡ್ಡದಾಳಿ. ಒಂದೇ ವ್ಯತ್ಯಾಸವೆಂದರೆ ಈ ದಾಳಿಯ ಹಿಂದೆ ಯಾರಿದ್ದಾರೆ ಎಂಬುದಕ್ಕೆ ಖಚಿತ ಆದಾರಗಳಿಲ್ಲದಿರುವುದು. ಜಗತ್ತಿನ ವಿವಿಧೆಡೆ ಹಬ್ಬುತ್ತಿರುವ ಧಾರ್ಮಿಕ ಮೂಲಭೂತವಾದ ಜಗತ್ತಿನ ಶಾಂತಪ್ರಿಯರೆಲ್ಲರ ನಿದ್ದೆ ಗೆಡಿಸಿದೆ ತಾಲಿಬಾನ್ ನಿಯಂತ್ರಣದಲ್ಲಿರುವ ಅಫಘಾನಿಸ್ತಾನ ಎಲ್ಲ ಭಯೋತ್ಪಾದಕ ಚಟುವಟಿಕೆಗಳ ಕೇಂದ್ರಸ್ಥಾನವಾಗುತ್ತಿರುವುದು ಆತಂಕದ ಸಂಗತಿ.

ಭಯೋತ್ಪಾದನೆಯನ್ನು ದಮನ ಮಾಡಲು ಮತ್ತೊಂದು ಭಯೋತ್ಪಾದನೆಯನ್ನು ಸೃಷ್ಟಿಸಬೇಕು ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಪ್ರಜಾಪ್ರಭುತ್ವದ ಮೌಲ್ಯಗಳ ಮಿತಿಯಲ್ಲೇ ಕೆಲಸ ಮಾಡಬೇಕಾದ ಅನಿವಾರ್ಯತೆ ಭಾರತ ಹಾಗೂ ಅಮೇರಿಕಾಗಳಿಗಿದೆ. ಭಯೋತ್ಪಾದನೆಯ ವಿರುದ್ಧದ ಸಮರದಲ್ಲಿ ಭಾರತದ

ಪಾತ್ರವನ್ನು ಕಡೆಗಣಿಸಲು ಸಾಧ್ಯವಿಲ್ಲ. ಭಯೋತ್ಪಾದನೆಯ ವಿರುದ್ಧ ಹೋರಾಡಿದ ಹಲವು ದಶಕಗಳ ಅನುಭವ ಭಾರತಕ್ಕಿದೆ. ಇದು ಖಂಡಿತವಾಗಿ ಪ್ರಯೋಜನಕಾರಿಯಾಗಬಲ್ಲದು.

ಅಮೇರಿಕಾ ಈಗಾಗಲೇ ಸೂಡಾನ್, ಇರಾನ್‌ದಂತಹ ರಾಷ್ಟ್ರಗಳಿಂದಲೂ ಸಹಾಯವನ್ನು ಯಾಚಿಸಿದೆ. ಬ್ರಿಟನ್ ಸೇರಿದಂತೆ ಯುರೋಪಿನ ಅನೇಕ ರಾಷ್ಟ್ರಗಳು ಅಮೇರಿಕದ ಬೆಂಬಲಕ್ಕೆ ನಿಂತಿವೆ. ಅಮೇರಿಕದ ಒತ್ತಡಕ್ಕೆ ಮಣಿದ ಪಾಕಿಸ್ತಾನ ಅಮೇರಿಕದೊಂದಿಗೆ ಸಹಕರಿಸಲು ಒಪ್ಪಿಕೊಂಡಿದೆ. ಚೀನಾವು ಅಮೇರಿಕಾಕ್ಕೆ ಬೆಂಬಲಿಸಿದೆ. ಹೀಗೆ ಭಯೋತ್ಪಾದನೆಯ ಪಿಡುಗನ್ನು ಬೇರು ಸಹಿತ ನಾಶ ಮಾಡಲು ಜಾಗತಿಕ ವೇದಿಕೆ ರೂಪುಗೊಂಡಿದ್ದು ಸ್ವಾಗತಾರ್ಹ ವಿಚಾರವಾಗಿವೆ. ಮಾನವತೆಗೆ ಕಳಂಕವಾದ ಈ ಭಯೋತ್ಪಾದನೆಯನ್ನು ಬುಡ ಸಮೇತ ಕಿತ್ತು ಹಾಕಲು ನಾವು ನಡೆಸುವ ಹೋರಾಟವೇ ಆ ಅಮಾಯಕರಿಗೆ ನಾವು ಸಲ್ಲಿಸುವ ನಿಜವಾದ ಶ್ರದ್ಧಾಂಜಲಿ.

— **ಪರಮೇಶ್ವರಿ ಕೆ. ಶ್ಯಾನಭಾಗ**
ಪ್ರಥಮ ಪಿ. ಯು. ಸಿ.

## ಗಣಪತಿ

ಚೌತಿಯ ದಿನದಂದು ಪೂಜಿಸಿ ಗಣಪನ
ಭಕ್ತಿಯಿಂದ ಕೈಮುಗಿಯಿರಿ ನೋಡಿ ಅವನ
ಕೇಳಿದ ವರಗಳನು ಕೊಡುತ್ತಾನೆ ನೋಡಿ
ಬೇಕಾದ ವರಗಳ ಬೇಡಿ ನೋಡಿ

## ಭಯೋತ್ಪಾದನೆ

ಇಂದು ಎಲ್ಲೆಲ್ಲೂ ಭಯೋತ್ಪಾದನೆಯ ಹಾವಳಿ
ಅಮೇರಿಕಾದ ಮೇಲೂ ಮಾಡಿದರು ಧಾಳಿ
ಲ್ಯಾಡನ್ನನೇ ಇದಕೆ ಕಾರಣನು ಎಂದು
ಪ್ರತಿಧಾಳಿ ನಡೆಸಿತು ಅಮೇರಿಕಾ ಇಂದು

## ಅಂತ್ರಾಕ್ಸ್

ಅಂತ್ರಾಕ್ಸ್ ಇದು ಒಂದು ಭೀಕರ ರೋಗ
ಹರಡಿದೆ ಇಂದು ಪ್ರಪಂಚದೆಲ್ಲೆಡೆಯು ಜಾಗ
ಜಗತ್ತಿನೆಲ್ಲೆಡೆಗೆ ಪತ್ರವನು ಕಳಿಸಿ
ರೋಗವ ಹರಡುವರು ಪತ್ರವನು ಬಳಸಿ

— **ಕೆ. ಎಸ್. ಸಣ್ಮುಖ**, ಒಂಬತ್ತು ಬಿ. ವರ್ಗ

# ಅರ್ಥಶಾಸ್ತ್ರ

"ಧನವಿದ್ದೆಡೆ ಧನ್ಯ
ವಿಶ್ವದಲಿ ಅವರು ಮಾನ್ಯ
ಅರಿತಕೆ ಅವರು ಅರ್ಥಶಾಸ್ತ್ರ ಜ್ಞಾನ
ಅಭಿವೃದ್ಧಿಯಲ್ಲಿ ಅವರಿಗೆ ಸ್ಥಾನ"

ಸಾಮಾನ್ಯವಾಗಿ ವಿಜ್ಞಾನವನ್ನು 2 ಭಾಗಗಳಾಗಿ ವಿಂಗಡಿಸಬಹುದು. ಒಂದು ನೈಸರ್ಗಿಕ ವಿಜ್ಞಾನ. ಎರಡು ಸಾಮಾಜಿಕ ವಿಜ್ಞಾನ. ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಇತಿಹಾಸ, ನೀತಿಶಾಸ್ತ್ರ ಮುಂತಾದ ವಿಷಯಗಳು ಸಾಮಾಜಿಕ ವಿಜ್ಞಾನದ ವ್ಯಾಪ್ತಿಯಲ್ಲಿ ಬರುತ್ತವೆ. ಇವುಗಳಲ್ಲಿ ಅರ್ಥಶಾಸ್ತ್ರ ಅತ್ಯಂತ ಪ್ರಮುಖವಾಗಿದೆ. ಅರ್ಥಶಾಸ್ತ್ರವು ಮನುಷ್ಯನ ಆರ್ಥಿಕ ಚಟುವಟಿಕೆಗೆ ಸಂಬಂಧಿಸಿದೆ. ಸಾಮಾಜಿಕ ವಿಜ್ಞಾನದಲ್ಲಿ ಉಳಿದೆಲ್ಲ ವಿಷಯಗಳು ಅಂದರೆ ಅರ್ಥಶಾಸ್ತ್ರವನ್ನ ಬಿಟ್ಟು ಮನುಷ್ಯನಿಗೆ ವಿವಿಧ ಚಟುವಟಿಕೆಗಳನ್ನು ತಿಳಿಸುತ್ತದೆ.

ಅರ್ಥಶಾಸ್ತ್ರವು ಇಂಗ್ಲೀಷ್ ಭಾಷೆಯಲ್ಲಿ ಇಕೊನೋಮಿಕ್ಸ್ (Economics) ಎಂದು ಕರೆಯಲ್ಪಡುತ್ತವೆ. ಈ ಶಬ್ದವು ಗ್ರೀಕ್ ಭಾಷೆಯ ಇಕೊನೋಮಿಯಾ (Economia) ಎಂಬ ಶಬ್ದದಿಂದ ಬಂದಿದೆ. ಇಕೋಸ (Ekos) ಮತ್ತು (Nomas) ಎಂಬ ಎರಡು ಪದಗಳು ಸೇರಿ ಇಕೊನೋಮಿಯಾ ಎಂಬ ಪದವು ರೂಪಗೊಂಡಿದೆ. "ಗೃಹಕಾರ್ಯ ನಿರ್ವಹಣೆ" ಎಂಬುದು ಈ ಪದದ ಅರ್ಥ. ಕ್ರಮೇಣ ಇದೇ ಪದವನ್ನು ರಾಜ್ಯ ಕಾರ್ಯ ನಿರ್ವಹಣೆಗೆ ಬಳಸಲಾಯಿತು. ರಾಜ್ಯದ ಕಾರ್ಯ ನಿರ್ವಣೆಯಲ್ಲಿ ರಾಜಕೀಯ ಮತ್ತು ಆರ್ಥಿಕ ಸಂಗತಿಗಳೆಲ್ಲ ಸೇರುತ್ತದೆ. ಆದ್ದರಿಂದಲೇ ಪ್ರಾಚೀನ ಗ್ರೀಕರು ರಾಜಕೀಯ ಅರ್ಥಶಾಸ್ತ್ರ (Political Economy) ಎಂದು ಕರೆದರು. ಹತ್ತೊಂಬತ್ತನೆಯ ಶತಮಾನದವರೆಗೂ ಇದೇ ಕಲ್ಪನೆ ಇತ್ತು. ನಂತರ ಇದು ಒಂದು ಸ್ವತಂತ್ರ ಶಾಸ್ತ್ರವಾಗಿ ಬೆಳೆಯಿತು. ಈಗ ಅರ್ಥಶಾಸ್ತ್ರವೆಂಬ ವಿಷಯ ಎಲ್ಲರಿಗೂ ಉಪಯುಕ್ತವಾದ ಒಂದು ಮಹತ್ವದ ಶಾಸ್ತ್ರವಾಗಿ ಬೆಳೆದಿದೆ.

ಅರ್ಥಶಾಸ್ತ್ರವನ್ನು ಕ್ರಿ. ಶ. 5ನೇ ಶತಮಾನದಷ್ಟು ಹಿಂದೆಯೇ ಗ್ರೀಕರು ಬರೆದರು ಅದರಂತೆ ಭಾರತದಲ್ಲಿ ಕೌಟಿಲ್ಯನು "ಅರ್ಥಶಾಸ್ತ್ರ"ವೆಂಬ ಗ್ರಂಥವನ್ನು ಬರೆದನು. ಹೀಗೆ ಇದೊಂದು ಪುರಾತನ ವಿಷಯವಾದರೂ ಅದರ ಬೆಳವಣಿಗೆ ಪ್ರಾರಂಭವಾಯಿತೆನ್ನುವುದು ಇತ್ತೀಚೆಗೆ ಮಾತ್ರ, ಇಂಗ್ಲೆಂಡ್‌ದ ಅರ್ಥಶಾಸ್ತ್ರಜ್ಞರ ಪ್ರಯತ್ನದ ಫಲವಾಗಿ ಇದರ ಬೆಳವಣಿಗೆ ಪ್ರಾರಂಭವಾಯಿತು. ಇಂಗ್ಲೆಂಡದ

ಅರ್ಥಶಾಸ್ತ್ರಜ್ಞರಾದ ಎಡಂ ಸ್ಮಿತ್ ಎಂಬುವವರು 1776ರಲ್ಲಿ "ವೇಲ್ತ್ ಆಫ್ ನೇಶನ್ಸ್" ಎಂಬ ಗ್ರಂಥ ಬರೆದರು. ಅರ್ಥಶಾಸ್ತ್ರವು ಒಂದು ಸ್ವತಂತ್ರ ಶಾಸ್ತ್ರವಾಯಿತು. ಚಿಕ್ಕ ಗಿಡಕ್ಕೆ ನೀರು ಗೊಬ್ಬರ ನೀಡಿ ಬೆಳೆಸಿದಂತೆ ಅದು ಬೆಳೆಯಿತು.

ಆರ್ಥಿಕ ಚಟುವಟಿಕೆಗಳು ಮಾನವನ ಜೀವನದಲ್ಲಿ ಅತ್ಯಂತ ಪ್ರಮುಖವಾದುವು. ಪ್ರತಿ ವ್ಯಕ್ತಿಯು ಆರ್ಥಿಕ ಚಟುವಟಿಕೆಗಳನ್ನು ಕೈಗೊಳ್ಳಲೇಬೇಕು. ಇಲ್ಲವಾದಲ್ಲಿ ನೀರಿಲ್ಲದ ಕೆರೆಯಂತಾಗುತ್ತದೆ. ಅರ್ಥಶಾಸ್ತ್ರವು "ಸಂಪತ್ತನ್ನು ಅಭ್ಯಸಿಸುವ ಶಾಸ್ತ್ರ" ವೆಂದು ಎಡಂ ಸ್ಮಿತ್‌ರು ಹೇಳಿದ್ದಾರೆ. ಇವರು ಸಂಪತ್ತಿಗೆ ಹೆಚ್ಚು ಮಹತ್ವ ನೀಡಿದ್ದರಿಂದ ಇವರ ಅರ್ಥಶಾಸ್ತ್ರದ ವ್ಯಾಖ್ಯೆಯನ್ನು "ಸಂಪತ್ತು ಆಧಾರಿತ ವ್ಯಾಖ್ಯೆ" ಎಂದು ಕರೆಯಲಾಗಿದೆ. ಪ್ರೊಫೆಸರ್ ಆಲ್‌ಫ್ರೆಡ್ ಮಾರ್ಷಲ್‌ರ ಪ್ರಕಾರ ಅರ್ಥಶಾಸ್ತ್ರ "ಮನುಷ್ಯನ ಸಾಮಾನ್ಯ ವ್ಯವಹಾರಿಕ ಜೀವನವನ್ನು ಅಭ್ಯಸಿಸುವ" ಶಾಸ್ತ್ರವಾಗಿದೆ. ಸಂಪತ್ತಿನಿಂದ ಮಾನವನ ಯೋಗಕ್ಷೇಮವನ್ನು ಸರಿಯಾಗಿರಲು ಒತ್ತುಕೊಟ್ಟಿದ್ದರಿಂದ ಇವರ ಅರ್ಥಶಾಸ್ತ್ರ ವ್ಯಾಖ್ಯೆಯನ್ನು ಯೋಗಕ್ಷೇಮ ಆಧಾರಿತ ವ್ಯಾಖ್ಯೆ ಎನ್ನುವರು. ಲಿಯೊನೆಲ್ ರಾಬಿನ್ಸರ ಪ್ರಕಾರ ಮಾನವನ ಇಷ್ಟಗಳು ಮತ್ತು ಕೊರತೆಯಲ್ಲಿರುವ ಮತ್ತು ಪರ್ಯಾಯ ಉಪಯೋಗಗಳನ್ನು ಹೊಂದಿರುವ ಸಂಪನ್ಮೂಲಗಳ ನಡುವಿನ ಸಂಬಂಧಗಳ ವಿಷಯದಲ್ಲಿ ಮನುಷ್ಯನ ವರ್ತನೆಯನ್ನು ಅಭ್ಯಸಿಸುವುದೇ ಅರ್ಥಶಾಸ್ತ್ರ. ಈ ವ್ಯಾಖ್ಯೆಯಲ್ಲಿ ಅಡಕವಾಗಿರುವ ಎಲ್ಲ ಅಂಶಗಳು ಕೊರತೆಯಲ್ಲಿರುವ ಸಂಪನ್ಮೂಲಗಳ ಬಗ್ಗೆ ವಿವರಿಸುತ್ತವೆ. ಆದ್ದರಿಂದ ಇವರ ಅರ್ಥಶಾಸ್ತ್ರ ವ್ಯಾಖ್ಯೆಯನ್ನು ಕೊರತೆ ಆಧಾರಿತ ಅರ್ಥಶಾಸ್ತ್ರ ವ್ಯಾಖ್ಯೆ ಎಂದು ಕರೆಯಲಾಗಿದೆ.

ಅರ್ಥಶಾಸ್ತ್ರದ ವ್ಯಾಪ್ತಿ ಇಂದು ವಿಶಾಲವಾಗಿ ಹರಡಿದೆ. ಈ ವಿಷಯದಲ್ಲಿ ಯಾವ ಯಾವ ಸಂಗತಿಗಳನ್ನು ಅಭ್ಯಸಿಸಲಾಗುತ್ತವೆ ಎಂಬುದನ್ನು ಅದರ ವ್ಯಾಪ್ತಿಯಿಂದ ತಿಳಿಯಬಹುದು. ಸುಮಾರು ಎರಡು ನೂರು ವರ್ಷದಲ್ಲಿ ಅರ್ಥಶಾಸ್ತ್ರಕ್ಕೆ ಅನೇಕ ಅರ್ಥಶಾಸ್ತ್ರಜ್ಞರು ತಮ್ಮ ಕೊಡುಗೆ ಕೊಟ್ಟಿದ್ದಾರೆ. ಅದರ ಫಲವಾಗಿ ಇಂದು ಅದರ ವ್ಯಾಪ್ತಿ ಹೆಮ್ಮರವಾಗಿ ಬೆಳೆದಿದೆ. ಹೂವು ಬೀರುವ ಸುವಾಸನೆಯಂತೆ ಅರ್ಥಶಾಸ್ತ್ರದ ವ್ಯಾಪ್ತಿ ಹರಡಿದೆ. ಇಂದು ಅರ್ಥಶಾಸ್ತ್ರವು ಒಂದು ಬೃಹತ್ ಶಾಸ್ತ್ರವಾಗಿ ಬೆಳೆದಿದೆ. ಕಾಲದಿಂದ ಕಾಲಕ್ಕೆ ಅರ್ಥಶಾಸ್ತ್ರಜ್ಞರ ವಿಚಾರಗಳು ಬದಲಾಗುವುದು ಸಹಜ.

ಒಂದು ಕಾಲದ ಜನಜೀವನ, ಸಾಮಾಜಿಕ ವ್ಯವಸ್ಥೆ, ಪರಿಸರ ಇತ್ಯಾದಿ ಒಂದು ಅರ್ಥವ್ಯವಸ್ಥೆಯ ಮೇಲೆ ಪರಿಣಾಮ ಬೀರುತ್ತವೆ. ಕಾಲ ಬದಲಾದಂತೆ ಹೊಸ ಆರ್ಥಿಕ ಸಮಸ್ಯೆ ಹುಟ್ಟಿಕೊಳ್ಳುತ್ತವೆ. ಅವುಗಳಿಗೆ ಅರ್ಥಶಾಸ್ತ್ರಜ್ಞರು ಕಾರಣ ಮತ್ತು ಪರಿಣಾಮಗಳನ್ನು ಹುಡುಕಲು ಪ್ರಯತ್ನಿಸುತ್ತಾರೆ. ಇದರ ಸಲುವಾಗಿ ಹೊಸ ವಿಚಾ

ಗಳು, ತತ್ವಗಳು ಮತ್ತು ಸಿದ್ಧಾಂತಗಳು ಹುಟ್ಟಿಕೊಳ್ಳುತ್ತವೆ. ಅವು ಅರ್ಥಶಾಸ್ತ್ರದ ಗರ್ಭ ಸೇರುತ್ತದೆ. ಪ್ರಾಚೀನ ಕಾಲದಿಂದಲೂ ಹೀಗೆ ಆರ್ಥಿಕ ಚಿಂತನೆ ನಡೆದಿದೆ. ಅದು ಮುಂದುವರಿಯುತ್ತಲೂ ಇದೆ.

ದೇಶದಲ್ಲಿ ಆರ್ಥಿಕ ಕ್ಷೇತ್ರದಲ್ಲಿ ಉನ್ನತಿ ಹೊಂದಿದರೆ ಉಳಿದೆಲ್ಲ ಕ್ಷೇತ್ರಗಳು ತನ್ನಿಂದ ತಾನೇ ಉನ್ನತಿ ಹೊಂದುತ್ತವೆ. ಆರ್ಥಿಕ ಕ್ಷೇತ್ರ ದೇಶದ ಬೆನ್ನೆಲುಬು. ದೇಶದ ಅರ್ಥವ್ಯವಸ್ಥೆ ಅಭಿವೃದ್ಧಿ ಆಗಿದ್ದಲ್ಲಿ ಆ ದೇಶ ಅಭಿವೃದ್ಧಿ ಹೊಂದುವುದು ಸಾಧ್ಯ. ಇಂದು ಅರ್ಥಶಾಸ್ತ್ರಕ್ಕೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಅರ್ಥಶಾಸ್ತ್ರ ಇಂದು ಸಾಗರದಷ್ಟು ವಿಶಾಲವಾಗಿದೆ. ಅರ್ಥಶಾಸ್ತ್ರದ ನಿಜವಾದ ಸಮಸ್ಯೆಗಳು ಹೀಗಿವೆ. 1) ಏನನ್ನು ಉತ್ಪಾದಿಸಬೇಕು 2) ಹೇಗೆ ಉತ್ಪಾದಿಸಬೇಕು 3) ಯಾರಿಗಾಗಿ ಉತ್ಪಾದಿಸಬೇಕು. ಈ ಮೂರು ಸಮಸ್ಯೆಗಳನ್ನು ಸರಿಯಾಗಿ ಅರ್ಥೈಸಿಕೊಂಡಲ್ಲಿ ಹಾಗೂ ಅವುಗಳಿಗೆ ಸರಿಯಾದ ಮಾರ್ಗ ಕಂಡುಹಿಡಿದಲ್ಲಿ ಆ ದೇಶ ಅಭಿವೃದ್ಧಿ ಹೊಂದಲು ಖಂಡಿತ ಸಾಧ್ಯವಿದೆ.

ಭಾರತದಲ್ಲಿ ಇಂದು ಜನಸಂಖ್ಯೆ ಆಕಾಶದೆತ್ತರಕ್ಕೆ ಬೆಳೆಯುತ್ತಿದೆ. ಇಂತಹ ಪ್ರಸ್ತುತ ಪರಿಸ್ಥಿತಿಯಲ್ಲಿ ಭಾರತದ ಅರ್ಥವ್ಯವಸ್ಥೆ ಹಿಂದುಳಿದಿದೆ. ಭಾರತದಲ್ಲಿ ಇಂದು ಈ ಸಮಸ್ಯೆಯನ್ನು ಹೋಗಲಾಡಿಸಲು ಸರ್ವ ಪ್ರಯತ್ನ ಮಾಡುತ್ತಿದ್ದರೂ ಅದು ಅತಿ ಹೆಚ್ಚು ಫಲ ನೀಡುತ್ತಿಲ್ಲ ಇದಕ್ಕೆ ಕಾರಣ ಸಾಮಾನ್ಯ ಜನರಿಂದ ಮೊದಲಗೊಂಡು ಶ್ರೀಮಂತರಿಗೂ ಸರಿಯಾದ ಅರ್ಥಶಾಸ್ತ್ರದ ಜ್ಞಾನ ಇಲ್ಲದಿರುವುದಾಗಿದೆ. ಹಣವನ್ನು ಕಂಡಾಗ ಹೆಣ ಬಾಯಿ ಬಿಡುವ ಪ್ರಸ್ತುತ ಪರಿಸ್ಥಿತಿಯಲ್ಲಿ ಭಾರತದಲ್ಲಿನ ಜನರಿಗೆ ಹಣವನ್ನು ಹೇಗೆ ವಿನಿಯೋಗಿಸಬೇಕು. ಬಂಡವಾಳವನ್ನು ಹೇಗೆ ತೊಡಗಿಸಬೇಕು ಎನ್ನುವುದಷ್ಟು ಸರಿಯಾಗಿ ತಿಳಿಯದ ವಿಷಯವಾಗಿದೆ ಭಾರತೀಯರಾದ ನಾವು ಇನ್ನೂ ಹೆಚ್ಚು ಹೆಚ್ಚು ಅರ್ಥಶಾಸ್ತ್ರಜ್ಞಾನ ಹೊಂದಬೇಕಾಗಿದೆ. ಭಾರತದ ಸಂಪತ್ತನ್ನು ಸರಿಯಾದ ರೀತಿಯಲ್ಲಿ ವ್ಯವಸ್ಥಿತವಾಗಿ ಉಪಯೋಗಿಸಿದಲ್ಲಿ ಭಾರತದ ಅಭಿವೃದ್ಧಿ ಸಾಧ್ಯವಿದೆ.

ಕ್ಷೇತ್ರದಲ್ಲಿ ಕ್ಷೇತ್ರ ಆರ್ಥಿಕ ಕ್ಷೇತ್ರ
ಶಾಸ್ತ್ರದಲ್ಲಿ ಶಾಸ್ತ್ರ ಅರ್ಥಶಾಸ್ತ್ರ
ಮಾಡದಿದ್ದಲ್ಲಿ ಅರ್ಥಶಾಸ್ತ್ರ ಅಭ್ಯಾಸ
ಉಳಿದ ಜ್ಞಾನವೆಲ್ಲ ನೀರಸ !

ಅರ್ಥಶಾಸ್ತ್ರದ ಮಹತ್ವ ಇಂದು ಗಗನದೆತ್ತರಕ್ಕೆ ಬೆಳೆದಿದೆ.

**ಅರ್ಥಶಾಸ್ತ್ರದ ಮಹತ್ವ :**

1) ಅರ್ಥಶಾಸ್ತ್ರವು ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿಯುವ ಬುದ್ಧಿಶಕ್ತಿ ಬೆಳೆಸುತ್ತದೆ.

2) ಅರ್ಥಶಾಸ್ತ್ರವು ವಿವಿಧ ಅರ್ಥವ್ಯವಸ್ಥೆಗಳ ಬಗೆಗೆ ನಮಗೆ ತಿಳುವಳಿಕೆ ಕೊಡುತ್ತದೆ.

3) ಇದು ಉತ್ಪಾದಕರಿಗೂ ಉಪಯುಕ್ತ ಜ್ಞಾನವನ್ನು ಕೊಡುತ್ತವೆ.

4) ಅರ್ಥಶಾಸ್ತ್ರವು ಉತ್ತಮ ನಾಗರಿಕರನ್ನು ತಯಾರಿಸುತ್ತದೆ.

5) ಅರ್ಥಶಾಸ್ತ್ರವು ಅನುಭೋಗಿಗಳಿಗೆ ಜಾಣ್ಮೆಯ ವೆಚ್ಚವನ್ನು ಕಲಿಸಿ ಕೊಡುತ್ತದೆ.

6) ದೇಶದ ಆಡಳಿತ ನಡೆಸುವವರಿಗೂ ಅರ್ಥಶಾಸ್ತ್ರ ಅಧ್ಯಯನ ಬಹಳ ಉಪಯುಕ್ತವಾದುದು.

7) ಅಂತರಾಷ್ಟ್ರಿಯ ಸಮಸ್ಯೆಗಳ ಬಗ್ಗ ಅರ್ಥಶಾಸ್ತ್ರವು ತಿಳುವಳಿಕೆ ಕೊಡುತ್ತದೆ.

8) ಬಡ ದೇಶಗಳಿಗೆ ಅರ್ಥಶಾಸ್ತ್ರದ ಅಧ್ಯಯನವು ಬಹಳ ಉಪಯುಕ್ತವಾದುದು.

ಅರ್ಥಶಾಸ್ತ್ರ ಒಂದು ಸಮಾಜಶಾಸ್ತ್ರ. ಪ್ರತಿಯೊಬ್ಬ ವ್ಯಕ್ತಿಯು ಸಮಾಜದಲ್ಲಿ ಬದುಕುವಾಗ ಆರ್ಥಿಕ ಸಮಸ್ಯೆಯಾದ ಆರ್ಥಿಕ ಕೊರತೆಯನ್ನು ಎದುರಿಸಲೇಬೇಕು. ದಿನನಿತ್ಯ ಜೀವನದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಅರ್ಥಶಾಸ್ತ್ರ ಜ್ಞಾನ ಬೇಕು. ಇನ್ನೆಲ್ಲ ಜ್ಞಾನಕ್ಕಿಂತ ಅತಿ ಅವಶ್ಯವಾಗಿದೆ. ಉಳಿದ ಎಲ್ಲ ಕ್ಷೇತ್ರಗಳ ಜ್ಞಾನ ಪಡೆದು ಆರ್ಥಿಕ ಕ್ಷೇತ್ರದ ಜ್ಞಾನ ಪಡೆಯದಿದ್ದರೆ ಅಜ್ಞಾನ ಉಪ್ಪಿಲ್ಲದ ಊಟದಂತೆ, ಸಿಹಿ ಇಲ್ಲದ ಹಣ್ಣಿನಂತೆ, ಕಣ್ಣಿದ್ದರೂ ಕುರುಡನಂತೆ ಅಜ್ಞಾನವಾಗುತ್ತದೆ. ಆದರ್ಶ ಗೃಹಿಣಿಗೆ ಮನೆಯ ಆದಾಯ ವೆಚ್ಚಗಳನ್ನು ಸರಿದೂಗಿಸಿ ಕುಟುಂಬದ ಆರ್ಥಿಕ ಸುಖವನ್ನು ಹೆಚ್ಚಿಸಿಕೊಳ್ಳಲು ಈ ಅಭ್ಯಾಸ ದಿನನಿತ್ಯ ಉಪಯೋಗವಾಗುತ್ತದೆ. ಈ ರೀತಿ ಒಬ್ಬ ಸಾಮಾನ್ಯ ವ್ಯಕ್ತಿಯಿಂದ ಹಿಡಿದು ದೇಶದ ಆಡಳಿತ ನಡೆಸುವವರಿಗೂ ಅರ್ಥಶಾಸ್ತ್ರ ಜ್ಞಾನಬೇಕು. ದೇಶದ ಎಲ್ಲ ನಾಗರಿಕರಿಗೂ ಅರ್ಥಶಾಸ್ತ್ರ ಜ್ಞಾನ ಅವಶ್ಯಕ. ಅಡಿಗೆಗೆ ನೀರು ಎಷ್ಟು ಅವಶ್ಯವೋ ಅರ್ಥಶಾಸ್ತ್ರ ಜ್ಞಾನವು ಕೂಡ ಅಷ್ಟೆ ಅವಶ್ಯ ನಮ್ಮ ಜೀವನಕ್ಕಾಗಿದೆ. ಭಾರತ ದೇಶದ ಪ್ರತಿಯೊಬ್ಬ ಭಾರತೀಯನೂ ಅರ್ಥಶಾಸ್ತ್ರ ಜ್ಞಾನ ಹೊಂದಿ ಸರಿಯಾಗಿ ಆರ್ಥಿಕ ಚಟುವಟಿಕೆ ನಡೆಸಿ ದೇಶದ ಅರ್ಥವ್ಯವಸ್ಥೆಯನ್ನು ಅಭಿವೃದ್ಧಿಪಡಿಸಬೇಕು.

ಭಾರತೀಯರಾದ ನಾವು ನಿಮ್ಮೆಲ್ಲರೂ ಭಾರತದ ಅರ್ಥ ವ್ಯವಸ್ಥೆಯನ್ನು ಅಭಿವೃದ್ಧಿ ಪಡಿಸಬೇಕಾದರೆ ಅರ್ಥಶಾಸ್ತ್ರ ಜ್ಞಾನ ಪಡೆಯಬೇಕು. ಅರ್ಥಶಾಸ್ತ್ರ ಪಡೆದು ದೇಶವನ್ನು ಅಭಿವೃದ್ಧಿಯತ್ತ ಕೊಂಡೊಯ್ಯುವುದು ನಮ್ಮ ನಿಮ್ಮೆಲ್ಲರ ಆದ್ಯ ಕರ್ತವ್ಯ.

— ಸಮಾಪ್ತಿ —

— ಉಮಾ ಪಟಗಾರ

# ವಿದ್ಯಾರ್ಥಿ ಜೀವನದ ಬವಣೆಗಳು

ವಿದ್ಯೆಯನ್ನು ಸಂಪಾದಿಸುವವನೇ ವಿದ್ಯಾರ್ಥಿ. ವಿದ್ಯಾರ್ಥಿ ಜೀವನವೆಂದರೆ ಅದೊಂದು ಸುವರ್ಣಮಯ ಕಾಲ. ಮಾನವ ಜೀವನದಲ್ಲಿ ಬಾಲ್ಯದಿಂದ ಹಿಡಿದು ಸಾಮಾನ್ಯವಾಗಿ ಯೌವನದವರೆಗೆ ಬರುವ ಈ ಸುಸಂಧಿಯು ಭಾವೀ ಜೀವನದ ಬಾಳ ಬುತ್ತಿಯಾಗುತ್ತದೆ. ಋಷಿಗಳ ಕಾಲದಲ್ಲಿದ್ದ ಆಶ್ರಮ ಪದ್ಧತಿಯ ವಿದ್ಯಾರ್ಥಿ ಜೀವನಕ್ಕೂ, ಇಂದು ನಾವು ಇರುವ ಕಾಲದ ವಿದ್ಯಾರ್ಥಿ ಜೀವನಕ್ಕೂ ಅಜಗಜಾಂತರ ವ್ಯತ್ಯಾಸವಿದೆ.

ಕಲಿಕೆಯಲ್ಲಿನ ಪ್ರತಿಭೆ ಪ್ರಕೃತಿಯ ಹಾಗೇ ರುದ್ರರಮಣೀಯ, ಮೋಹಕ ಭಯಂಕರ ಅದಕ್ಕೆ ಸಾವಿರ ದಾರಿಗಳಿವೆ. ಅದು ಸಹಸ್ರಾಕ್ಷ, ಸಹಸ್ರಶೀರ್ಷ, ಸಹಸ್ರ ರೂಪಿ, ಸದಾ ಕ್ರಿಯಾನಿರತ, ಸೃಷ್ಟಿಶೀಲ, ವಿದ್ಯಾರ್ಥಿ ಜೀವನ ಒಂದು ವಸಂತಕಾಲ ವಿದ್ದಂತೆ. ಈ ಸಮಯದಲ್ಲಿ ಜ್ಞಾನ ತೃಪೆಯಿರಬೇಕು. ಜ್ಞಾನದ ಕಾಂಡವು ಚಿಗುರೊಡೆದು ಹೊಸ ಮೊಗ್ಗುಗಳನ್ನು ಹೊಂದಿ ನಿತ್ಯ ನೂತನ ಬಂದಾಗ ಆದರ್ಶ ವಿದ್ಯಾರ್ಥಿಯಾಗಲು ಸಾಧ್ಯ.

ವಿದ್ಯೆಗೆ ಸಮನಾದ ಕಣ್ಣಿಲ್ಲ. ಸತ್ಯಕ್ಕೆ ಸಮನಾದ ಸಾಧನೆಯೂ ಇಲ್ಲ. ಮನುಷ್ಯನ ಸಾಧನೆಯೆಲ್ಲವೂ ಅವನು ಮಾಡುವ ಪ್ರಯತ್ನದಲ್ಲಿಯೇ ಇದೆ, ಆದರೆ ಇಂತಹ ಪ್ರಯತ್ನಗಳಿಗೆ ಫಲ ದೊರೆಯಲು ಅನೇಕ ಬವಣೆಗಳು ಎದುರಾಗುತ್ತವೆ. ಅಂತಹ ಬವಣೆಗಳಲ್ಲಿ ಪ್ರಮುಖವಾದದ್ದು:

1) **ಅಭ್ಯಾಸದ ಹೊರೆ:** ಪ್ರಾಚೀನ ಕಾಲದಲ್ಲಿ ಕೆಲವೇ ವಿಷಯಗಳಿದ್ದು ವಿದ್ಯಾರ್ಥಿಗಳಿಗೆ ಓದಲು ಅನುಕೂಲವಾಗುತ್ತಿತ್ತು. ಆದರೆ, ಈಗ ಹಿಂದಿನಂತೆ ಕೆಲವೇ ವಿಷಯಗಳು ಮಾತ್ರವಿರದೇ ಇದ್ದ ವಿಷಯಗಳಿಗೇ ಅನೇಕ ಉಪ ವಿಷಯಗಳ ಸಂಖ್ಯೆ ಅಪಾರವಾಗುತ್ತದೆ. ಇದು ವಿದ್ಯಾರ್ಥಿಗಳ ಕಲಿಕೆಯ ಮೇಲೆ ಪರಿಣಾಮ ಬೀರುತ್ತವೆ.

2) **ವೇಳೆಯ ಅಭಾವ:** ಆಧುನಿಕವಾದ ಈ ಕಾಲದಲ್ಲಿ ವೇಳೆ ಸರಿಯುವುದೇ ತಿಳಿಯದು. ಹೆಚ್ಚಿನ ಪುಸ್ತಕಗಳು ಇರುವುದರಿಂದ ಅದನ್ನು ಅಭ್ಯಸಿಸಲು ಬಹಳ ಕಷ್ಟದಾಯಕವಾಗಿದೆ. ಬಡ ವಿದ್ಯಾರ್ಥಿಗಳು ಒಂದು ಕಡೆ ದುಡಿದು ಆ ಹಣದಿಂದ ಶಾಲೆಗೆ ಕಲಿಯಲು ಹೋಗುತ್ತಿರುವುದರಿಂದ ಹೆಚ್ಚಿನ ಅಭ್ಯಾಸ ಮಾಡಲು ಸಾಧ್ಯವಾಗದೇ ಇರುವುದು. ಇದು ಬಡ ವಿದ್ಯಾರ್ಥಿಗಳ ಮೇಲೆ ಪರಿಣಾಮ ಬೀರುತ್ತದೆ.

3) **ಓಡಾಟದ ಸಮಸ್ಯೆ :** ಭಾರತ ಹಳ್ಳಿಗಳ ದೇಶ. ಹಳ್ಳಿಗಳಲ್ಲಿ ಶಾಲೆ, ಕಾಲೇಜುಗಳ ಕೊರತೆಯಿಂದ ಅಲ್ಲಿಯ ವಿದ್ಯಾರ್ಥಿಗಳು ದೂರ-ದೂರದಲ್ಲಿರುವ ಶಾಲೆ-ಕಾಲೇಜುಗಳಿಗೆ ಮೊರೆ ಹೋಗಬೇಕಾಗಿದೆ. ಇಂತಹ ಶಾಲೆಗಳಲ್ಲಿ ಶಿಕ್ಷಣ ಪಡೆಯಲು ವಾಹನಗಳನ್ನು ಅವಲಂಬಿಸಿರುತ್ತಾರೆ. ಪ್ರತಿದಿನ ಬಸ್ಸಿನಲ್ಲಿ ಸಂಚರಿಸುವ ಪಾಸ ಪಡೆದ ವಿದ್ಯಾರ್ಥಿಗಳು ವೇಳೆ ಇಲ್ಲದ ಮತ್ತು ಬಾರದೇ ಇರುವ ಬಸ್ಸಿಗೆ ಕಾಯ್ದು-ಕಾಯ್ದು ಸುಸ್ತಾಗಿ ರಸ್ತೆಗಳಲ್ಲಿ ಕಾಲಹರಣ ಮಾಡುವಂಥ ಪರಿಸ್ಥಿತಿ ತಲೆದೋರಿದೆ. ಇದರಿಂದ ಅಂತಹ ವಿದ್ಯಾರ್ಥಿಗಳಿಗೆ ಓಡಾಟದ ಸಮಯ ವ್ಯರ್ಥವಾಗುವುದಲ್ಲದೇ. ಕಲಿಕೆಯು ಸುಗಮವಾಗಿ ಸಾಗಲು ಸಾಧ್ಯವಿಲ್ಲ.

4) **ಪದೇ-ಪದೇ ಬದಲಾಗುತ್ತಿರುವ ವಿಷಯಗಳು :** ಇಂದಿನ ವೈಜ್ಞಾನಿಕ ಯುಗದಲ್ಲಿ ಮೊದಲಿನಂತೆ ಒಂದು ಪಠ್ಯ ಪುಸ್ತಕ ಅನೇಕ ಕಾಲದವರೆಗೆ ಇರದೇ ಪದೇ. ಪದೇ ಬದಲಾಗುತ್ತಿರುವುದು ಇತ್ತೀಚಿನ ದಿನಗಳಲ್ಲಿ ಕಂಡುಬರುತ್ತಿವೆ. ಇಂದಿನ ದಿನದಲ್ಲಿ ಪ್ರಾಥಮಿಕ ವಿದ್ಯಾರ್ಥಿಗಳಿಗೆ ಪುಸ್ತಕಗಳು ವರ್ಷಕ್ಕೊಮ್ಮೆ ಬದಲಾಗುತ್ತಿರುವುದಲ್ಲದೇ ಒಂದು-ಎರಡನೇ ಕ್ಲಾಸಿನಲ್ಲಿ ಓದುವ ವಿದ್ಯಾರ್ಥಿಗಳಿಗೆ ರಚನಾತ್ಮಕ ಚಟುವಟಿಕೆಯಲ್ಲಿ ತೊಡಗಿಸದೇ ಹಲವಾರು ವಿಷಯಗಳನ್ನು ಓದಬೇಕೆಂಬ ಹೊರೆಯನ್ನು ಹೇರಲಾಗಿದೆ. ಚಿಕ್ಕದೊಂದು ಗುಬ್ಬಿಯ ಕೊರಳಲ್ಲಿ ದೊಡ್ಡದೊಂದು ಬಂಡೆಯನ್ನು ಕಟ್ಟಿದಂತಾಗಿದೆ'.

5) **ಬೋಧನೆ :** ಬೋಧನೆಯು ಇಂದು ಪರಿಣಾಮಕಾರಿಯಾಗುವುದರ ಬದಲಾಗಿ ಬರೀ ಯಾಂತ್ರಿಕವಾಗುತ್ತಿದೆ. ಉದ್ದೇಶ-ಗುರಿಗಳಲ್ಲಿದ ವ್ಯರ್ಥ ಪಯಣದ ಹಾಗೇ ಇಂದಿನ ಶಿಕ್ಷಣ ಸಾಗುತ್ತಿದೆ. ಆಯಾ ಹಂತಗಳಲ್ಲಿನ ವಿದ್ಯಾರ್ಥಿಗಳಿಗೆ ಪಠ್ಯ ವಿಷಯಗಳಲ್ಲಿ ಬಂದಿರುವಂತಹ ಕಠಿಣ ಶಬ್ದಗಳ ಅರ್ಥವನ್ನು ಸರಳ ರೀತಿಯಲ್ಲಿ ಅರ್ಥೈಸದೇ ಇನ್ನೂ ಕ್ಲಿಷ್ಟಕರವಾಗಿ ಹೇಳಿದ್ದಲ್ಲಿ, ಮಂದಗಾಮಿಗಳು ಅದನ್ನು ಅರ್ಥೈಸಿಕೊಳ್ಳುವಷ್ಟರಲ್ಲಿ ಬೋಧನೆ ಮುಂದೆ ಸಾಗಿರುತ್ತದೆ. 'ನೀರಿಳಿಯದ ಗಂಟಲಿನಲ್ಲಿ ಕಡಬು ತುರುಕಿದಂತಾಯಿತು' ಎನ್ನುವಂತಾಗುತ್ತೆ ಅವರ ಸ್ಥಿತಿ.

6) **ಪೈಪೋಟಿ :** ಪ್ರತಿಯೊಂದು ಶಾಲಾ-ಕಾಲೇಜುಗಳಲ್ಲಿ ಪ್ರವೇಶಕ್ಕಾಗಿ ಪೈಪೋಟಿ ಅಧಿಕಗೊಂಡು ಕೊಂಚ ಕಡಿಮೆ ಅಂಕ ಪಡೆದ ವಿದ್ಯಾರ್ಥಿಗಳಿಗೆ ಪ್ರವೇಶ ನಿರಾಕರಿಸುವಂತಹ ಸ್ಥಿತಿ ಉದ್ಭವಿಸಿದೆ. ಇದರೊಂದಿಗೆ ಡೊನೆಶನ್ ಪಿಡುಗು ವಿದ್ಯಾರ್ಥಿಗಳ ಜೊತೆಗೆ ಪಾಲಕರನ್ನು ಕೈ ಕಟ್ಟಿ ಕೂರಿಸಿದೆ. ಇದು ಕೆಲವೊಮ್ಮೆ ವಿದ್ಯಾರ್ಥಿಗಳಿಗೆ ಆತ್ಮಹತ್ಯಗೆ ಕಾರಣವಾಗುತ್ತದೆ. ಇದಲ್ಲದೇ, ಕಲಿಯುವುದಕ್ಕಾಗಿ ಶಾಲೆಗೆ ಹೋಗುವ ಆ ಕಾಲ ಮುಗಿದೇ ಹೋಯಿತು. ಇದೀಗ ವಿದ್ಯಾರ್ಥಿಗಳು ಒಂದೊಂದೇ ಪರೀಕ್ಷೆಗಳನ್ನು ತೇರ್ಗಡೆಯಾಗುತ್ತಾ ಓದನ್ನು ಮುಗಿಸಿ ಡಿಗ್ರಿಧಾರಿಗಳಾಗಲು ಶಿಸ್ತಿನ ಸಿಪಾಯಿಗಳಂತೆ ಶಾಲೆಗೆ ಹೋಗುತ್ತಿದ್ದಾರೆ. ಇದರಿಂದ 'ಕಲಿಕೆ'ಯ ಅರ್ಥ ಸಂಕುಚಿತಗೊಂಡು

‘ಓದು’ ಎಂಬಲ್ಲಿಗೆ ಬಂದು ನಿಂತಿದೆ. ಈಗ ಎಲ್ಲಾ ಉದ್ಯೋಗಗಳು ಅವರು ಪಡೆದ ಅಂಕಗಳ ಮೇಲೆ ಆಧಾರವಾಗಿದೆಯೇ ಹೊರತು ಜ್ಞಾನಕ್ಕಲ್ಲ. ಇದು ಕಡಿಮೆ ಅಂಕ ಪಡೆದ ವಿದ್ಯಾರ್ಥಿಗಳಿಗೆ ಒಂದು ಸಮಸ್ಯೆಯಾಗಿ ಉದ್ಭವಿಸಿದೆ.

7) **ಕ್ಲಿಷ್ಟ ವಿಷಯಗಳು :** ಮೊದಲು ವಿಷಯಗಳು ಸರಳವಾಗಿದ್ದು, ಸುಲಭವಾಗಿ ಅರ್ಥೈಸಲಾಗುತ್ತಿತ್ತು. ಆದರೆ ಇಂದಿನ ವೈಜ್ಞಾನಿಕ ಯುಗದಲ್ಲಿ ಅನೇಕ ಉಪ ವಿಷಯಗಳನ್ನು ಪಠ್ಯವಿಷಯಕ್ಕೆ ಅಳವಡಿಸಿದ್ದರಿಂದ ಅವರ ಶಕ್ತಿ-ಸಾಮರ್ಥ್ಯಕ್ಕಿಂತ ಹೆಚ್ಚಿನ ವಿಷಯಗಳನ್ನು ಅಭ್ಯಸಿಸಬೇಕಾಗಿದೆ. ಇವು ಒಹಳ ಕ್ಲಿಷ್ಟವಾಗಿದ್ದು ಮಂದಮತಿಯರು ಅರ್ಥೈಸಿಕೊಳ್ಳಲು ಅನೇಕ ಕಾಲಾವಧಿ ಬೇಕಾಗುತ್ತದೆ. ಇದರಿಂದ ಅವರಿಗೆ ಹೆಚ್ಚಿನ ಶಿಕ್ಷಣ ಪಡೆಯಲು ಸಾಧ್ಯವಾಗುತ್ತಿಲ್ಲ.

8) **ಆರ್ಥಿಕ ಪರಿಸ್ಥಿತಿ :** ಬಡವ-ಶ್ರೀಮಂತ-ಮಧ್ಯಮ ವರ್ಗಗಳಿಂದ ಬಂದಂತಹ ವಿದ್ಯಾರ್ಥಿಗಳೆಲ್ಲರೂ ಕೂಡಿ ಬಾಳುವ ಒಂದು ಜ್ಞಾನದೇಗುಲವೇ ಶಾಲೆ. ಆದರೆ ಶಾಲೆ-ಕಾಲೇಜುಗಳಲ್ಲಿ ಕೆಲವೊಮ್ಮೆ ಹೆಚ್ಚು ಡೊನೇಶನ ತೆಗೆದುಕೊಳ್ಳುವುದರಿಂದ ಬಡ ವಿದ್ಯಾರ್ಥಿಗಳು ಅದನ್ನು ಸರಿಯಾದ ಸಮಯದಲ್ಲಿ ಪೂರೈಸಲಾಗದೇ ಮಾನಸಿಕ ಒತ್ತಡಕ್ಕೆ ಒಳಗಾಗುತ್ತಾರೆ. ಇದು ಸಹ ಅವರ ಜೀವನದ ಮೇಲೆ ದುಷ್ಪರಿಣಾಮ ಬೀರುತ್ತದೆ.

9) **ಕೌಟುಂಬಿಕ ತಿಳುವಳಿಕೆ :** ‘ಮನೆಯೇ ಮೊದಲ ಪಾಠಶಾಲೆ, ಜನನಿ ತಾನೇ ಮೊದಲ ‘ಗುರುವು’ ಎಂದು ಜಾನಪದಗೀತೆಯೊಂದು ಹೇಳುತ್ತದೆ. ಆದರೆ ಇಂತಹ ಸೌಲಭ್ಯಗಳು ಎಷ್ಟು ಜನ ಮಕ್ಕಳಿಗೆ ಲಭಿಸುತ್ತವೆ ಎನ್ನುವುದನ್ನು ವಿಚಾರಿಸಿದಾಗ ನಿಜವಾಗಿಯೂ ಖೇದ ಪಡಬೇಕಾಗುತ್ತದೆ. ಮನೆಯಲ್ಲಿ ಪಾಲಕರು, ಪೋಷಕರು ಅನಕ್ಷರಸ್ಥರಾಗಿದ್ದಲ್ಲಿ, ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅನುಗುಣವಾಗಿ ಯಾವುದೇ ಸಲಹೆ ಸೂಚನೆಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಪ್ರತಿಯೊಂದು ವಿಷಯಕ್ಕೂ ಬೇರೆಯವರಲ್ಲಿ ಮೊರೆ ಹೋಗಬೇಕಾಗುತ್ತದೆ.

10) **ಸ್ವಾಂತಿಕೆಗೆ ಬೆಲೆಯಿಲ್ಲ :** ದಿನದ 24 ಘಂಟೆಗಳಲ್ಲಿ ನಿದ್ದೆ ಮಾಡುವಷ್ಟು ಸಮಯವನ್ನು ಹೊರತುಪಡಿಸಿ, ಇನ್ನುಳಿದ ಸಮಯವನ್ನೆಲ್ಲಾ ತನ್ನ ಮಗು ಓದಿಕೊಳ್ಳಲಿ ಎಂದು ಅಪೇಕ್ಷಿಸುವ ಹೆತ್ತವರಿದ್ದಾರೆ. ಇದು ತೀರಾ ಅಪ್ರಾಯೋಗಿಕ ಮತ್ತು ಅನವಶ್ಯಕ. ಶಾಲೆಯಲ್ಲಿ ಅನೇಕ ಗಂಟೆಗಳ ಕಾಲ ಓದು. ಮನೆಗೆ ತಲುಪಿದ ಕೂಡಲೇ ಓದು. ಹೀಗೆ ಮಾಡಿದಲ್ಲಿ ಮಕ್ಕಳ ಮನಸ್ಸಿಗೆ ವಿರಾಮವಿಲ್ಲದೇ ಬೇಸರ ಮೂಡೀತು. ‘ಓದಿ ಓದಿ ಮರುಳಾದ ಕೂಚು ಭಟ್ಟ’ ಎನ್ನುವಂತಾಯಿತು. ಇದಲ್ಲದೇ ಕೆಲವು ಕುಟುಂಬಗಳಲ್ಲಿ ವಿದ್ಯಾರ್ಥಿಗಳ ಮೇಲೆ ಮಾನಸಿಕವಾದ ಒತ್ತಡ ತರುತ್ತಾರೆ. ವಿದ್ಯಾರ್ಥಿಗಳು ಒಂದು ಕ್ಷೇತ್ರದಲ್ಲಿ ಆಸಕ್ತಿ ಹೊಂದಿ ಅದರಲ್ಲಿ ಕಲಿಯಲು ಆಸಕ್ತಿ

ತೋರಿದಾಗ, ಹಿರಿಯರು ಆ ಕ್ಷೇತ್ರಬೇಡವೆಂದು ನಿರಾಕರಿಸಿ ತಮಗೆ ಸರಿಹೊಂದಿದ ಕ್ಷೇತ್ರಕ್ಕೆ ಸೇರಿಸುತ್ತಾರೆ. ಈ ರೀತಿ ಮಾಡುವದರಿಂದ ವಿದ್ಯಾರ್ಥಿಗಳು ಆ ಕ್ಷೇತ್ರದಲ್ಲಿ ಆಸಕ್ತಿ ಹೊಂದದೇ ಇರುವುದರಿಂದ ಅದನ್ನು ಕಲಿಯದೇ ಇತರ ಆಕರ್ಷಣೆಗೆ ಒಳಗಾಗುವ ಸಾಧ್ಯತೆಯಿದೆ.

11) **ಸಂಸ್ಕೃತಿ:** ಇನ್ನು ಸುತ್ತಲಿನ ಪರಿಸರವೂ ಕೂಡಾ ವಿದ್ಯಾರ್ಥಿ ಜೀವನಕ್ಕೆ ಇಂದು ಮಾರಕವಾಗಿದೆಯೇ ವಿನಃ ತಾರಕವಾಗಿಲ್ಲ ರಾಜಕೀಯ ದುಷ್ಟ ಶಕ್ತಿಗಳ ಕಪಿಮುಷ್ಟಿಯಲ್ಲಾಗಲಿ, ವಿಕಾರಾತ್ಮಕ ಪ್ರಪಂಚದ ಸಂಪರ್ಕದಲ್ಲಾಗಲಿ, ಇಂದಿನ ವಿದ್ಯಾರ್ಥಿ ಸಿಲುಕಿರುತ್ತಾನೆ. ಕೆಲವು ಕುಟುಂಬಗಳಲ್ಲಿ ಸಂಸ್ಕೃತಿ ಸರಿಯಿರದೇ ಮಕ್ಕಳ ಜೀವನದ ಒಂದು ಸಮಸ್ಯೆಯಾಗಿ ಪರಿಗಣಿಸಲ್ಪಡುತ್ತದೆ.

12) **ದುಬಾರಿ ವೆಚ್ಚದ ಶಿಕ್ಷಣ:** ಅನೇಕ ಪಟ್ಟಣಗಳಲ್ಲಿ ಈ ಶಿಕ್ಷಣಗಳು ದೊರೆಯುತ್ತಿವೆ. ಆದರೆ ಶ್ರೀಮಂತ ವರ್ಗದವರು ಮಾತ್ರ ವಿದ್ಯಾಭ್ಯಾಸವನ್ನು ಇಲ್ಲಿ ಮುಂದುವರೆಸಲು ಸಾಧ್ಯವಾಗುತ್ತದೆ. ಬಡತನದಲ್ಲಿದ್ದ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಮುಂದುವರೆಸಲು ಸಾಧ್ಯವಾಗದೇ ಅರ್ಧದಲ್ಲೆ ಕೈ ಬಿಡುವ ಸಾಧ್ಯತೆಯಿದೆ. ಅವರಲ್ಲಿ ಅಂತಹ ಶಿಕ್ಷಣವನ್ನು ಪಡೆಯುವಷ್ಟು ಹಣ ಇರದೇ ಇರುವುದು ಅದರ ಮುಖ್ಯ ಕಾರಣವಾಗಿದೆ. ಅತ್ತ ಶಿಕ್ಷಣವೂ ಇಲ್ಲ, ಇತ್ತ ಉದ್ಯೋಗವೂ ಇಲ್ಲ ಎನ್ನುವಂತೆ ನಿರುದ್ಯೋಗಿಗಳಾಗಿ ಅಲೆದಾಡುವ ಸ್ಥಿತಿ ತಲೆದೋರುವ ಸಾಧ್ಯತೆಯಿದೆ.

13) **ಭಾಷಾ ಮಾಧ್ಯಮ:** ಈಗ ನಮ್ಮ ಸಮಾಜದಲ್ಲಿ ಸಮಾನ ಸೌಲಭ್ಯವುಳ್ಳ ಶಾಲೆಗಳ, ಏಕರೂಪದ ಶಿಕ್ಷಣ ದೊರೆಯುವುದು ಬಹಳ ಕಷ್ಟದಾಯಕವಾಗಿದೆ. ಅದರ ಬದಲು ಇಂಗ್ಲೀಷ ಮಾಧ್ಯಮದ ಶಾಲೆಗಳು, ಕನ್ನಡ ಮಾಧ್ಯಮದ ಶಾಲೆಗಳು ಎಂದು ಎರಡನ್ನು ಇರಿಸಿಕೊಂಡು ಸಮಾಜವನ್ನು ಶಿಕ್ಷಣ ಮಾಧ್ಯಮದ ಮೂಲಕ ವಿಭಜಿಸಿದ್ದಾರೆ. ಭಾಷೆ ಕೂಡ ಜಾತಿಗಳ ಹಾಗೆ ವರ್ಗಭೇದಗಳನ್ನು ಉಳಿಸಿಕೊಳ್ಳುವ ತಂತ್ರವಾಗುತ್ತಿರುವುದು ನಮ್ಮ ಶಿಕ್ಷಣ ಕ್ರಮದೊಳಗಿನ ಅಪಾಯಗಳಲ್ಲಿ ಒಂದಾಗಿದೆ. ಇಂಗ್ಲೀಷ್ ಮಾಧ್ಯಮ ಶಿಕ್ಷಣವು 3-4 ವರ್ಷದ ಮಕ್ಕಳಿಗೆ ಅಭ್ಯಸಿಸಲು ತೊಂದರೆಯಾಗುತ್ತಿದ್ದರೂ, ಅದನ್ನು ಕಲಿಯಲೇಬೇಕೆಂಬ ಪಾಲಕರ ಒತ್ತಡ ಚಿಕ್ಕ ಮಕ್ಕಳ ಮೇಲೆ ಪರಿಣಾಮ ಬೀರುತ್ತದೆ.

14) **ಸಂಪು:** ಈಗ ಅನೇಕ ಸ್ಥಳಗಳಲ್ಲಿ ಕಾಣುವಂತೆ ಶಾಲೆ-ಕಾಲೇಜುಗಳ ವಿದ್ಯಾರ್ಥಿಗಳು ಸಣ್ಣ-ಸಣ್ಣ ವಿಷಯಗಳಿಗೂ, ತಮ್ಮ ಗುಂಪಿನ ಜೊತೆ ಸಂಪು ಏರ್ಪಡಿಸುತ್ತಾರೆ. ಪರೀಕ್ಷಾ ಕ್ರಮ, ಅಸಮರ್ಪಕ ಮೌಲ್ಯಮಾಪನ, ಸಾರಿಗೆ ಸಂಪರ್ಕ, ಸರಿಯಾದ ಸಮಯದಲ್ಲಿ ಪಠ್ಯಕ್ರಮ ಒದಗದೇ ಇದ್ದಾಗ ಮಕ್ಕಳು ತಮ್ಮದೇ ಆದ ಸಂಪನ್ನು ಏರ್ಪಡಿಸುತ್ತಾರೆ. ಇದರಿಂದ ಹಲವು ದಿನಗಳವರೆಗೆ ಶಾಲೆ-ಕಾಲೇಜುಗಳನ್ನು ಮುಚ್ಚ

ಬೇಕಾದ ಪರಿಸ್ಥಿತಿ ಬರುತ್ತದೆ. ಅನೇಕ ದಿನಗಳವರೆಗೆ ಶಾಲೆಗಳನ್ನು ಮುಚ್ಚುವುದ ರಿಂದ ಶಿಕ್ಷಕರಿಗೂ ಬೋಧಿಸಲು ಸಾಧ್ಯವಾಗುವುದಿಲ್ಲ. ಇದರಿಂದ ಅನೇಕ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಾರೆ. ಇದು ಆ ಸಂಪು ಏರ್ಪಡಿಸುವ ವಿದ್ಯಾರ್ಥಿಗಳಿಗಷ್ಟೇ ಪರಿಣಾಮ ಬೀರದೆ, ಇತರರಿಗೂ ಹಾನಿ ಉಂಟಾಗುತ್ತದೆ. ಇಂತಹ ಸಮಸ್ಯೆಗಳು ವಿದ್ಯಾರ್ಥಿಗಳ ಜೀವನದ ಪ್ರಗತಿಗೆ ಮುಳ್ಳಿನ ಹಾಗೇ, ದೊಡ್ಡ ಕಂಟಕಗಳಾಗಿ ಪರಿಣಮಿಸಿವೆ.

**ನಿವಾರಣೋಪಾಯಗಳು :**

1) ವಿದ್ಯಾರ್ಥಿಗಳಿಗೆ ಸುಲಭವಾಗಿ, ಸರಳವಾಗಿ ಅರ್ಥೈಸುವಂತಹ ಪಠ್ಯಕ್ರಮಗಳನ್ನು ಅಳವಡಿಸಬೇಕು.

2) ಶಿಕ್ಷಕರು ವಿದ್ಯಾರ್ಥಿಗಳಲ್ಲಿ ಜ್ಞಾನದಾಹ ಹೆಚ್ಚಿಸಿ ತಮ್ಮನ್ನು ತಾವೇ ಅಭ್ಯಾಸ ದಲ್ಲಿ ತೊಡಗಿಸಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಬೇಕು.

3) ಶಿಕ್ಷಕರು ಕ್ಲಿಷ್ಟ ವಿಷಯಗಳನ್ನು ಉತ್ತಮ ಚರ್ಚೆಯಿಂದ, ವಿನೋದದಿಂದ, ಮಾತಿನ ಚಾತುರ್ಯದಿಂದ ಮಕ್ಕಳಲ್ಲಿ ಆಸಕ್ತಿ ಕೆರಳಿಸಿ ಬೋಧನ ಮಾಡಬೇಕು.

4) ಶಿಕ್ಷಕರಾದವರು ಸಂಬಳಕ್ಕಾಗಿ ದುಡಿಯುವ ಭಾವನೆಯನ್ನು ಹೊಂದಿರದೇ ವಿದ್ಯಾರ್ಥಿಗಳ ಮನಸ್ಸನ್ನು ಆಳವಾಗಿ ಅಧ್ಯಯನ ಮಾಡಿ, ಅವರ ಮನಸ್ಸನ್ನು ಸ್ಪಂದಿಸಿ ಅವರ ಸಮಸ್ಯೆಗಳಿಗೆ ಪರಿಹಾರ ಮಾಡಬೇಕು.

5) ಶಾಲೆಯ ಹಾಗೂ ಮನೆಯ ಪರಿಸರ ಉತ್ತಮವಾಗಿದ್ದು ಮಕ್ಕಳ ಮನಸ್ಸಿನ ಮೇಲೆ ಪರಿಣಾಮ ಬೀರುವಂತಿರಬೇಕು.

6) ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಕೇವಲ ಪರೀಕ್ಷೆಗಾಗಿ ಅಧ್ಯಯನ ಮಾಡದೇ, ಜ್ಞಾನಕ್ಕಾಗಿ ಇತರ ಪುಸ್ತಕಗಳನ್ನು ಓದುವ ಹವ್ಯಾಸವನ್ನು ಹೊಂದಿರಬೇಕು.

7) ಮಕ್ಕಳ ಮನೋಗತಿಯನ್ನು ತಿಳಿದುಕೊಂಡು ಅವರಿಗೆ ಸಮಯಕ್ಕನುಸಾರವಾಗಿ ಸೂಕ್ತ ಪೂರಕ ಪರಿಸರವನ್ನೊದಗಿಸಿಕೊಟ್ಟು, ಪರ್ಯಾಯವಾಗಿ ಅವರನ್ನು ಉತ್ತಮ ಗುರಿಯತ್ತ ಕೊಂಡೊಯ್ಯುವುದೇ ಹಿರಿಯರ ಹಾಗೂ ಶಿಕ್ಷಕರ ಹೊಣೆಯಾಗಬೇಕು.

8) ದೇವಾಲಯದಲ್ಲಿ ಘಂಟೆ ಇದೆ. ನಾದವೂ ಇದೆ. ಆದರೆ ಆ ನಾದವು ಹೊರ ಹೊಮ್ಮಬೇಕಾದರೆ ಬಾಹ್ಯ ಪ್ರಚೋದನೆ ಎಷ್ಟು ಅವಶ್ಯಕವೋ ಹಾಗೇ ವಿದ್ಯಾರ್ಥಿಗಳ ವಿಕಾಸಕ್ಕೆ ಶಿಕ್ಷಕರ ಪ್ರೇರಣೆ ಅತೀ ಆವಶ್ಯಕವಾಗಬೇಕು.

ಮಗುವಿನ ಬೆಳವಣಿಗೆಯ ಹಂತದಲ್ಲಿ ದುರಭ್ಯಾಸ, ದುರ್ವಿಚಾರ ಹಾಗೂ ಹೀನ ಸಂಸ್ಕೃತಿಯನ್ನು ಮೊಳೆಯುವ ಮೊದಲೇ ಚಿವುಟಿ ಹಾಕಿ, ಅರಳದ ಮೊಗ್ಗಿನಂತೆ, ಬೀಜದಲ್ಲಿ ಹುದುಗಿರುವ ಸತ್ವದಂತೆ, ಮೋಡಗಳ ಮರೆಯಲ್ಲಿ ಮಿನುಗುವ ಮಿಂಚಿನ

ಬಳ್ಳಿಯಂತೆ, ಎಲೆಮರೆಯ ಕಾಯಂತೆ ಅವರಲ್ಲಿ ಹುದುಗಿದ 'ಪ್ರತಿಭೆ'ಯೆಂಬ ಜೀವನಾಡಿಯನ್ನು ಗುರುತಿಸಿ, ಅದು ಹೆಮ್ಮರವಾಗಿ ಬೆಳೆಯುವಂತೆ ಮಾಡುವುದು ಹಿರಿಯರ ಹಾಗೂ ಶಿಕ್ಷಕರ ಕರ್ತವ್ಯವಾಗಬೇಕು.

9) ನಿಗದಿತ ವೇಳೆಯಲ್ಲಿ ಪಠ್ಯಪುಸ್ತಕಗಳನ್ನು ಪೂರೈಸಬೇಕು.

10) ದೂರ-ದೂರದ ಶಾಲೆ-ಕಾಲೇಜುಗಳಿಗೆ ಹೋಗುವ ವಿದ್ಯಾರ್ಥಿಗಳಿಗೆ ವಾಹನಗಳ ಸೌಕರ್ಯ ದೊರೆಯುವಂತೆ ಮಾಡಬೇಕು.

ಆಗ ಮಾತ್ರ ವಿದ್ಯಾರ್ಥಿಗಳ ಜೀವನ ಪ್ರಗತಿಯತ್ತ ಸಾಗಬಲ್ಲದು. ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಸಮಾನ ಸೌಲಭ್ಯ ದೊರಕಿದಾಗ ಮಾತ್ರ ಈ ದೇಶವೇ ಪ್ರಗತಿಪರ ಹೆಜ್ಜೆಯಲ್ಲಿ ಮುಂದುವರಿಯಲು ಸಾಧ್ಯವಾಗುತ್ತದೆ. ಇದರಿಂದ ಶಿಕ್ಷಕರು ಪೋಷಕರ ವಿದ್ಯಾರ್ಥಿಗಳ ಸಮಸ್ಯೆಗಳಿಗೆ ಸ್ಪಂದಿಸಿ, ಪರಿಹಾರ ನೀಡಬೇಕು.

ಸಮಸ್ಯೆಗಳನ್ನು ನಿವಾರಿಸಿದಾಗ ಮಾತ್ರ ವಿದ್ಯಾರ್ಥಿಗಳ ಈ ಪುಟ್ಟ ಪ್ರಪಂಚ ಅರಳಿ, ಇನ್ನೂ ವಿಸ್ತಾರದಲ್ಲಿ, ಉನ್ನತ ಧ್ಯೇಯೋದ್ದೇಶಗಳಿಗಾಗಿ ಸುಖಕರವಾಗಿ ಬದುಕಿ, ಬಾಳಿ ಸಮಾಜದಲ್ಲೊಂದು ಕಾಮನಬಿಲ್ಲಿನಂತೆ ಸಪ್ತರಂಗುಗಳನ್ನು ಚೆಲ್ಲಿ ಸಾರ್ಥಕತೆ ಪಡೆಯುತ್ತದೆ.

— ರಚನೆ **ಸುನೀತಾ ಎಸ್. ಪಟಗಾರ**
ದ್ವಿತೀಯ ಪಿ. ಯು. ಸಿ.

---

**ಭಾರ**

ಮಳೆ ನಿಂತ ಮೇಲೆ
ಜನರಿಗೆ ಕೊಡೆಯೇ ಭಾರ
ಫ್ಯಾಷನ್ ಬಂದ ಮೇಲೆ
ಯುವತಿಯರಿಗೆ ಜಡೆಯೇ ಭಾರ.

**ಪ್ರಾಬ್ಲಂ**

ಮನೆಗೆ ಬಂದರೆ ಹೆಂಡತಿಯ ಪ್ರಾಬ್ಲಂ
ಬಸ್-ಸ್ಟಾಂಡಗೆ ಹೋದರೆ ಬಸ್ಸಿನ ಪ್ರಾಬ್ಲಂ
ಶಾಲೆಗೆ ಬಂದರೆ ಮಕ್ಕಳ ಪ್ರಾಬ್ಲಂ
ಎಲ್ಲವೂ ಸೇರಿದರೆ ಜೀವನವೇ ಪ್ರಾಬ್ಲಂ

# ಭಾರತದ ಪ್ರಮುಖ ಬಂದರುಗಳು

| ಬಂದರು | | ರಾಜ್ಯ |
|---|---|---|
| 1. | ಆಲೆಪ್ಪಿ | ಕೇರಳ |
| 2. | ಭಾವನಗರ | ಗುಜರಾತ್ |
| 3. | ಕಲಕತ್ತ | ಪಶ್ಚಿಮ ಬಂಗಾಳ |
| 4. | ಕೊಚ್ಚಿನ | ಕೇರಳ |
| 5. | ಧನುಷ್ಕೋಟಿ | ತಮಿಳುನಾಡು |
| 6. | ಮದ್ರಾಸ್ | ತಮಿಳುನಾಡು |
| 7. | ಪರದೀಪ | ಒರಿಸ್ಸಾ |
| 8. | ಸುರತ್ | ಗುಜರಾತ್ |
| 9. | ವಿಶಾಖ ಪಟ್ಟಣ | ಆಂಧ್ರ ಪ್ರದೇಶ |
| 10. | ಭಟ್ಕಳ | ಕರ್ನಾಟಕ |
| 11. | ಮುಂಬಯಿ | ಮಹಾರಾಷ್ಟ್ರ |
| 12. | ಕ್ಯಾಲಿಕಟ್ | ಕೇರಳ |
| 13. | ಕಚವಾರರ | ತಮಿಳುನಾಡು |
| 14. | ಕಾಂಡ್ಲಾ | ಗುಜರಾತ್ |
| 15. | ಮಂಗಳೂರು | ಕರ್ನಾಟಕ |

# ಭಾರತದ ಪ್ರಮುಖ ನಿಲ್ದಾಣಗಳು

| | | |
|---|---|---|
| 1. | ಸಾಂತ್ರಾಕೂಜ್ | ಮುಂಬೈ |
| 2. | ಪಾಲಂ | ದಿಲ್ಲಿ |
| 3. | ಡಂ ಡಂ | ಕಲಕತ್ತಾ |
| 4. | ಮೀನಂಬಾಕಂ | ಮದ್ರಾಸ್ |
| 5. | ಅಮೌಸಿಕ | ಲಖನೌ |
| 6. | ಬಾಜಿಪೆ | ಮಂಗಳೂರು |
| 7. | ಬೇಗಮ ಪೇಟೆ | ಹೈದರಾಬಾದ |
| 8. | ಕಟಕ | ಭುವನೇಶ್ವರ |
| 9. | ದೀಪಾ | ಪಾಲಮಪುರ |

# ಪ್ರಮುಖ ದೇಶಗಳ ರಾಜಧಾನಿ ಹಾಗೂ ನಾಣ್ಯಗಳು

| ದೇಶ | ರಾಜಧಾನಿ | ನಾಣ್ಯ |
|---|---|---|
| ಸೋವಿಯತ್ ರಶಿಯ | ಮಾಸ್ಕೊ | ರೂಬಲ್ |
| ಅಮೇರಿಕಾ | ವಾಶಿಂಗ್ಟನ್ | ಡಾಲರ್ |
| ಇಂಗ್ಲೆಂಡ್ | ಲಂಡನ್ | ಪೌಂಡ್ |
| ಜಪಾನ್ | ಟೋಕಿಯೊ | ಯೆನ |
| ಚೀನ | ಬೀಜಿಂಗ (ಪೇಕಿಂಗ್) | ಯುಯಾನ್ |
| ಕಾನಡಾ | ಒಟಾವಾ | ಡಾಲರ್ |
| ನ್ಯೂಝಿಲಂಡ್ | ವೆಲಿಂಗ್ಟನ | ಡಾಲರ್ |
| ಪ್ರಾನ್ಸ | ಪ್ಯಾರಿಸ | ಪ್ರಾಂಕ |
| ಇಟಲಿ | ರೋಮ | ಲೀರಾ |
| ಬಾಂಗಲಾ ದೇಶ | ಡಾಕಾ | ಟಕಾ |
| ಬ್ರಹ್ಮದೇಶ | ರಂಗೂನ | ಯಾತ |
| ನೆದರ್ಲಂಡ (ಹಾಲಂಡ) | ಅಮಸ್ಟರಡಮ | ಗಿಲ್ಡರ |
| ಡೇನ್ಮಾರ್ಕ | ಕೋಪನ್ ಹೇಗನ್ | ಕ್ರೊನರ |
| ಇಂಡೋನೇಶಿಯಾ | ಜಕಾರ್ತಾ | ರುಪಿಯಾ |
| ಇರಾಕ | ಬಗದಾದ | ದಿನಾರ |
| ಇರಾಣ | ತೆಹರಾನ | ರಿಯಲ |
| ಕುವೈತ | ಕುವೈತ | ದಿನಾರ |
| ಕ್ಯುಬಾ | ಹವಾನಾ | ಪಿಸೊ |
| ದಕ್ಷಿಣ ಅಮೇರಿಕಾ | ಕೇಪಟಾನ | ರಾಂಡ |
| ಭಾರತ | ಹೊಸದಿಲ್ಲಿ | ರೂಪಾಯಿ |
| ಪಿನ್ಲಂಡ | ಹೆಲಸಿಂಕಿ | ಮಾರಕ್ಕಾ |
| ಪೋಲಂಡ | ವಾರ್ಸಾ | ಜ್ಲೊಟಿ |
| ಸ್ಪೇನ | ಮಾಡ್ರಿಡ | ಪೆಸತಾ |
| ಪಾಕಿಸ್ತಾನ | ಇಸ್ಲಾಮಬಾದ | ರುಪಾಯಿ |
| ಥಾಯಲಂಡ | ಬಾಂಕಾಕ | ಭಾತ |
| ಜರ್ಮನಿ | ಬರ್ಲಿನ | ಮಾರ್ಕ |

— ಸಂಗ್ರಹ ಶೋಭಿತಾ ಎಸ್. ಹೆಗಡೆ
8 ಬಿ. ವರ್ಗ

# ಅನುಭವದ ಮಹತ್ವ

ಚೀನಾ ದೇಶದಲ್ಲಿ ಚುವಾನ್ ಎಂಬ ಯುವಕ ದೊರೆ ಒಂದು ಸಲ ಪಟ್ಟವನ್ನೇರಿದ. ಆತ ವಿಚಿತ್ರ ಸ್ವಭಾವದ ವ್ಯಕ್ತಿ. ಅವನ ಮನಸ್ಸಿನಲ್ಲಿ ಒಮ್ಮೊಮ್ಮೆ ತಲೆಬುಡ ಇಲ್ಲದ ಯೋಚನೆ ಬರುತ್ತಿದ್ದವು. ಅದನ್ನು ನಡೆಸಿಕೊಡಬೇಕೆಂದು ಆತ ಹಟಹಿಡಿಯುತ್ತಿದ್ದ.

ಒಂದುಸಲ ದೊರೆಗೆ ಮುದುಕರಿಂದ ಕೆಲಸಮಾಡಲು ಸಾಧ್ಯವಿಲ್ಲ. ಅವರಿಂದ ದೇಶಕ್ಕೆ ನಷ್ಟವಾಗುತ್ತಿದೆ ಎಂಬ ಯೋಚನೆ ಬಂದಿತು. ಮಂತ್ರಿಗಳನ್ನು ಕರೆದು 'ಇನ್ನು ಮುಂದೆ ಅರವತ್ತು ವಯಸ್ಸು ದಾಟಿದ ಮುದುಕರು ನನ್ನ ರಾಜ್ಯದಲ್ಲಿರಬಾರದು. ಅವರನ್ನು ಅವರ ಮಕ್ಕಳು ಕಾಡಿನಲ್ಲಿ ಬಿಟ್ಟು ಬರಲಿ. ಇದನ್ನು ಪಾಲಿಸದವರಿಗೆ ಶಿಕ್ಷೆಯಾಗುತ್ತಿದೆ ಎಂದು ಸಾರಿಬಿಡಿ ಎಂದು ಹೇಳಿದ. ಮಂತ್ರಿಗಳು ಎಲ್ಲೆಡೆ ಡಂಗುರ ಸಾರಿದರು. ರಾಜಾಜ್ಞೆಗೆ ಹೆದರಿ ಅನೇಕರು ತಮ್ಮ ವೃದ್ಧ ತಂದೆ-ತಾಯಿಯರನ್ನು ಕಾಡಿನಲ್ಲಿ ಬಿಟ್ಟು ಬಂದರು. ರಾಜ್ಯದಲ್ಲಿ ಎಲ್ಲಿಯೂ ಮುದುಕರು ಕಾಣಿಸದಾದರು.

ಒಂದು ಹಳ್ಳಿಯಲ್ಲಿ ವಾಂಗ್ ಎಂಬ ಹುಡುಗನಿದ್ದ. ಅವನು ತನ್ನ ತಂದೆಯನ್ನು ತುಂಬಾ ಪ್ರೀತಿಸುತ್ತಿದ್ದ. ತಂದೆಯನ್ನು ಅರಣ್ಯದಲ್ಲಿ ಬಿಟ್ಟು ಬರಲು ಮನಸೊಪ್ಪದಿದ್ದರೂ, ವಿಧಿಯಿಲ್ಲದೆ ತನ್ನ ಹೆಗಲಮೇಲೆ ಕೂರಿಸಿಕೊಂಡು ಹೊರಟ. ಅವನ ತಂದೆ ದಾರಿಯುದ್ದಕ್ಕೂ ಕೈಗೆ ಸಿಕ್ಕಿದ ಮರದ ಎಲೆಗಳನ್ನು ಕಿತ್ತು ಹಾಕುತ್ತಿದ್ದುದನ್ನು ಕಂಡ ವಾಂಗ್ 'ಯಾಕಪ್ಪಾ, ಎಲೆಗಳನ್ನು ಹೀಗೆ ಕಿತ್ತು ಹಾಕುತ್ತಿದ್ದೀರಿ ?' ಎಂದು ಕೇಳಿದ.

'ನನ್ನನ್ನು ಕಾಡಿನಲ್ಲಿ ಬಿಟ್ಟು ಮನೆಗೆ ಮರಳುವಾಗ ನಿನಗೆ ದಾರಿ ತಪ್ಪಬಾರದು. ಈ ಎಲೆಗಳ ಗುರುತು ಹಿಡಿದು ಮನೆ ಸೇರಲು ಸುಲಭವಾದೀತೆಂದು ಹೀಗೆ ಮಾಡಿದೆ' ಎಂದ ತಂದೆ. ತನ್ನ ಕ್ಷೇಮವನ್ನು ಸದಾಕಾಲ ಚಿಂತಿಸುವ ತಂದೆಯನ್ನು ಕಾಡಿನಲ್ಲಿ ಬಿಟ್ಟು ಬರಲು ಅವನ ಮನಸೊಪ್ಪಲಿಲ್ಲ. ಕತ್ತಲಾದ ಮೇಲೆ ಯಾರಿಗೂ ತಿಳಿಯದಂತೆ ತಂದೆಯನ್ನು ಕರೆತಂದು ಮನೆಯ ಅಟ್ಟದಲ್ಲಿ ಬಚ್ಚಿಟ್ಟು, ಆಹಾರ ಕೊಡುತ್ತಿದ್ದ. ಈ ಗುಟ್ಟು ಇನ್ನೊಬ್ಬರಿಗೆ ಗೊತ್ತಾಗದಂತೆ ಜಾಗರೂಕನಾಗಿದ್ದ.

ಕೆಲದಿನಗಳ ನಂತರ ದೊರೆ ಇನ್ನೊಂದು ಆಜ್ಞೆ ಮಾಡಿದ. 'ಯಾರೇ ಆಗಲಿ, ಬೂದಿಯಿಂದ ಹಗ್ಗ ಹೊಸೆದು ತಂದರೆ, ಅವರು ಕೇಳಿದ ಉಡುಗೊರೆ ನೀಡುತ್ತೇನೆ.'

ಅಂದು ಮಧ್ಯಾಹ್ನ ತಂದೆಗೆ ಊಟ ತೆಗೆದುಕೊಂಡು ಹೋದ ವಾಗ 'ದೊರೆಯ ವಿಚಿತ್ರ ಆಜ್ಞೆ ಕೇಳಿದಿರಾ, ಬೂದಿಯಿಂದ ಹಗ್ಗ ಹೊಸೆದುಕೊಂಡು ಹೋದವರಿಗೆ

ಕೇಳಿದ್ದನ್ನು ಕೊಡುತ್ತಾನಂತೆ. ಇದನ್ನು ಯಾರಾದರೂ ಮಾಡಲು ಸಾಧ್ಯವೇ ?' ಎಂದ. ವಾಂಗ್‌ನ ತಂದೆ ನಕ್ಕುಬಿಟ್ಟ. 'ಯಾಕೆ ಸಾಧ್ಯವಿಲ್ಲ ? ಒಂದು ತಟ್ಟೆಯಲ್ಲಿ ಹಗ್ಗವನ್ನಿಟ್ಟು ಸುಡು. ಸಟ್ಟ ಬೂದಿ ಹಗ್ಗದಂತೆಯೇ ಕಾಣಿಸುತ್ತದೆ' ಎಂದ.

ವಾಂಗ್ ತಂದೆ ಹೇಳಿದಂತೆ ಹಗ್ಗ ಸುಟ್ಟು ತೆಗೆದುಕೊಂಡು ಹೋಗಿ ದೊರೆಗೆ ತೋರಿಸಿದಾಗ ಆತ ಖುಷಿಯಾದ. ಆದರೆ ಕೇಳಿದ್ದನ್ನು ಕೊಡುವ ಬದಲು ಒಂದು ಕೋಲನ್ನು ತರಿಸಿದ. ಕೋಲನ್ನು ವಾಂಗ್‌ಗೆ ತೋರಿಸಿ ಈ ಕೋಲಿನ ತಲೆ ಯಾವುದು, ಬುಡ ಯಾವುದು ಎಂದು ನೀನು ಹೇಳಬೇಕು. ಸರಿಯಾಗಿ ಹೇಳಿದರೆ ನಿನಗೆ ಬಹುಮಾನ, ಇಲ್ಲದಿದ್ದರೆ ನಿನ್ನ ತಲೆ ಹೋಗುತ್ತದೆ' ಎಂದ.

'ಉತ್ತರ ಹೇಳಲು ನಾಳೆಯವರೆಗೆ ಅವಕಾಶ ಕೊಡಿ' ಎಂದ ವಾಂಗ್ ಚಿಂತೆಯಿಂದಲೇ ಮನೆಗೆ ಬಂದ. ತಂದೆಯ ಬಳಿ ಹೋಗಿ ದೊರೆಯಿಂದ ಸನ್ಮಾನ ಪಡೆಯುವ ಬದಲು ತಾನು ಹೊಸ ಬಿಕ್ಕಟ್ಟಿನಲ್ಲಿ ಸಿಕ್ಕಿರುವುದನ್ನು ಹೇಳಿದ. ವಾಂಗ್ ತಂದೆ 'ಮಗನೇ ಚಿಂತಿಸಬೇಡ. ಒಂದು ದೊಡ್ಡ ಪಾತ್ರೆಯಲ್ಲಿ ನೀರು ತುಂಬಿ ಕೋಲನ್ನು ಅದರಲ್ಲಿ ಹಾಕು. ಆಗ ಕೋಲಿನ ತಲೆ ನೀರಿನ ಮೇಲ್ಭಾಗದಲ್ಲೂ, ಬುಡ ತಳಭಾಗದಲ್ಲೂ ಇರುತ್ತದೆ' ಎಂದು ಹೇಳಿದ. ವಾಂಗ್ ಮರುದಿನ ಅರಮನೆಗೆ ಬಂದು ನೀರಿನ ಪಾತ್ರೆಯಲ್ಲಿ ಕೋಲು ಹಾಕಿ, ಕೋಲಿನ ತಲೆ, ಬುಡ ಯಾವುದೆಂಬುದನ್ನು ಖಚಿತವಾಗಿ ಹೇಳಿದ. ನಂತರ 'ದೊರೆ, ನೀವು ಒಡ್ಡಿದ ಎರಡೂ ಸಮಸ್ಯೆಗಳನ್ನು ಬಿಡಿಸಿದ್ದೇನೆ. ನನಗೆ ಬಹುಮಾನ ಕೊಡಿ' ಎಂದು ಕೇಳಿದ.

ನಾಳೆ ನೀನು ತಾನಾಗಿ ಬಾರಿಸುವ ಮೃದಂಗ ತರಬೇಕು. ತರದಿದ್ದರೆ ನಿನ್ನನ್ನು ಶಿಕ್ಷಿಸುತ್ತೇನೆ' ಎಂದ ರಾಜ. ತಾನೇ ತಾನಾಗಿ ಬಾರಿಸುವ ಮೃದಂಗ ತಯಾರಿಸುವುದು ಹೇಗೆ? ವಾಂಗ್ ತಂದೆಯ ಬಳಿಗೆ ಬಂದು ಈ ಸಲ ನನ್ನ ತಲೆ ಉಳಿಯುವುದಿಲ್ಲ. ಎಂಥ ಬುದ್ಧಿವಂತನಿಗೂ ತಾನಾಗಿ ಬಾರಿಸುವ ಮೃದಂಗ ತಯಾರಿಸಲು ಸಾಧ್ಯವಿಲ್ಲ ಎಂದ. 'ಇದೇನು ಮಹಾ? ಚರ್ಮ ಮತ್ತು ಮರದ ಟೊಳ್ಳು ತೆಗೆದು ಕೊಂಡು ಬಾ. ಮೃದಂಗ ನಾನು ಮಾಡಿಕೊಡುತ್ತೇನೆ' ಎಂದ ವಾಂಗ್ ತಂದೆ. ಮರದ ಟೊಳ್ಳಿಗೆ ಚರ್ಮ ಮುಚ್ಚುವಾಗ, ಒಳಗಡೆ ಒಂದು ಜೀವಂತ ದುಂಬಿಯನ್ನು ಸೇರಿಸಿದ. ದುಂಬಿ ಝೇಂಕರಿಸುತ್ತ ಹಾರುವಾಗ ಮೃದಂಗದಿಂದ ತ್ರೋಂ-ತ್ರೋಂ ಎಂಬ ಧ್ವನಿ ಕೇಳಿಸುತ್ತಿತ್ತು. ವಾಂಗ್ ಅದನ್ನು ದೊರೆಯ ಬಳಿಗೆ ತೆಗೆದುಕೊಂಡು ಹೋದಾಗ ಆತ ಖುಷಿಯಾದ. 'ಹುಡುಗ, ನೀನು ಜಾಣನೆಂಬುದರಲ್ಲಿ ಸಂದೇಹವಿಲ್ಲ. ನಿನಗೆ ಏನು ಬಹುಮಾನ ಬೇಕು ಕೇಳು ಕೊಡುತ್ತೇನೆ' ಎಂದ.

ವಾಂಗ್ ಕೈ ಜೋಡಿಸಿ 'ನನಗೆ ಬಹುಮಾನ ಕೊಡಬೇಕೆಂಬ ಇಚ್ಛೆ ನಿಮಗಿದ್ದರೆ ಇನ್ನು ಮುಂದೆ ವೃದ್ಧರನ್ನು ಕಾಡಿನಲ್ಲಿ ಬಿಡಬೇಕೆನ್ನುವ ಕಠಿಣ ಆಜ್ಞೆ ಹಿಂತೆಗೆದುಕೊಳ್ಳಿ ಎಂದು ಪ್ರಾರ್ಥಿಸಿದ. ದೊರೆಗೆ ಆಶ್ಚರ್ಯವಾಯಿತು. ಆತ 'ಇದೇನು ಹೀಗೆ ಕೇಳಿ

ಕೊಳ್ಳುತ್ತಿದ್ದೀ? ವೃದ್ಧರಿಂದ ದೇಶಕ್ಕೆ ಏನೂ ಲಾಭವಿಲ್ಲವೆಂದು ನಿನಗೇಕೆ ಅರಿವಾಗದು?' ಎಂದು ಗದರಿಸಿದ. 'ನೀವು ತಿಳಿದುಕೊಂಡಿರುವುದು ತಪ್ಪು, ನಾನು ನನ್ನ ತಂದೆಯನ್ನು ಕಾಡಿನಲ್ಲಿ ಬಿಡದೆ ರಹಸ್ಯವಾಗಿ ಪೋಷಿಸುತ್ತಿದ್ದೇನೆ. ನೀವು ಕೊಟ್ಟ ಸಮಸ್ಯೆಗಳನ್ನು ಪರಿಹರಿಸಿದವರು ಅವರೇ. ನನ್ನನ್ನು ಶಿಕ್ಷಿಸಿ, ಆದರೆ ಆ ಆಜ್ಞೆ ಹಿಂತೆಗೆದುಕೊಳ್ಳಿ' ಎಂದು ವಾಂಗ್ ಕೇಳಿಕೊಂಡ.

ದೊರೆಯ ಕಣ್ಣು ಮಂಜಾಯಿತು. 'ವಾಂಗ್, ನೀನು ನನ್ನ ಕಣ್ಣು ತೆರೆಸಿದೆ. ವೃದ್ಧರು ಅನುಭವದ ಗಣಿಗಳು, ಅವರಿಂದ ದೇಶಕ್ಕೆ ಲಾಭವಿದೆ ಎಂಬುದನ್ನು ತೋರಿಸಿಕೊಟ್ಟೆ ನನ್ನ ಆಜ್ಞೆಯನ್ನು ಹಿಂತೆಗೆದುಕೊಳ್ಳುತ್ತೇನೆ. ನಿನಗೆ ಬಹುಮಾನ ಕೊಟ್ಟು ಪುರಸ್ಕರಿಸುತ್ತೇನೆ' ಎಂದು ಹೇಳಿದ.

— ಸಂಗ್ರಹ : **ನಾಗವೇಣಿ ಎಂ. ಗೌಡ**
9 ಬಿ ವರ್ಗ

---

### ಮ್ಯಾಚ್ ಪಿಕ್ಸಿಂಗ್

ಅಜಯ್ ಜಡೇಜಾ, ಮೊಂಗಿಯಾ ಮ್ಯಾಚ್ ಫಿಕ್ಸರಗಳು
ಹಣಕ್ಕಾಗಿ ದೇಶದ ಮಾನ ಕಳೆದ ನೀಚರು.
ಬೇಕಿಲ್ಲ ಇವರಿಗೆ ದೇಶದ ಪ್ರತಿಷ್ಠೆ ಘನತೆ
ಎಂದಿಗೂ ಕ್ಷಮಿಸಲಾರರು ಇವರನ್ನು ದೇಶದ ಜನತೆ

### ಜನಸಂಖ್ಯೆ ಸಾಧನೆ

ನೂರ್ಕೋಟಿ ದಾಟಿದ್ದೇವೆ ನಾವ್ಯಾರಿಗೆ ಕಮ್ಮಿ
ವಿಶ್ವದಲ್ಲೇ ಪ್ರಥಮ ಸ್ಥಾನ ಪಡೆಯುತಿರುವಾ ಹೆಮ್ಮೆ
ಇನ್ಮುಂದೆ ಚೀನಾ ಯಾವ ಲೆಕ್ಕ ಬಿಡಿ
ಪಾಕಿಸ್ತಾನ ಹೇಗೆ ತಲೆ ಬಾಗುವುದು ನೋಡಿ.

— ಸಂಗ್ರಹ : **ವೇದಾ ಕೃಷ್ಣ ಆಚಾರಿ**
9 ನೇ ತರಗತಿ

# ಮಾಲತಿ

ಮಾಡಗೇರಿ ಅತ್ಯಂತ ಚಿಕ್ಕ ಹಳ್ಳಿ. ಮೂರು ಕಡೆಗಳಿಂದ ಗುಡ್ಡ ಆವರಿಸಿದ್ದು ಒಂದು ಕಡೆಯಿಂದ ಹಳ್ಳ, ಹಳ್ಳಿಯನ್ನು ಎದುರು ನೋಡುತ್ತಿದೆ. ಸೂರ್ಯೋದಯವಾದರೂ ಬೆಳಕು ಹರಿಯುವುದಕ್ಕೆ 10–15 ನಿಮಿಷಗಳೇ ತಡವಾಗುವುದು. ಆದರೂ ಮೈಯೆಲ್ಲಾ ಸುಕ್ಕುಗಟ್ಟಿರುವ ಗಂಗಜ್ಜಿಯೊಂದಿಗೆ ಜೀವನ ಸಾಗಿಸುವ ಹದಿಹರೆಯದ ಸುಂದರ ತ್ವಚೆಯ ಹುಡುಗಿ ಮಾಲತಿ. ಬೆಳಗಾಗುವುದರೊಳಗೆ ಅಜ್ಜಿಗೆ ತಿಂಡಿ-ತಿನಿಸು ಕೊಟ್ಟು ಹತ್ತಿರದಲ್ಲಿರುವ ರಾಮು ಮಾಸ್ತರರ ಮನೆಯ ಮುಸುರಿ ಕೆಲಸಕ್ಕೆ ಹೋಗಿಬಿಡುತ್ತಿದ್ದಳು.

ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡು ಮಾಲತಿಗೆ ಮಾತೃ-ವಾತ್ಸಲ್ಯದ ನೆನಪೂ ಇರಲಿಲ್ಲ. ತಂದೆ ಕುಡುಕ. ಮನೆಯು ಎಲ್ಲಾ ಜಮೀನು ಮೂಲದ್ರವ್ಯಗಳನ್ನು ಕಳೆದು ಇನ್ನೇನು ಜೀವನ ಮಾಡುವುದಕ್ಕೆ ಸಾಧ್ಯವಿಲ್ಲವೆಂದು ಊರು ಬಿಟ್ಟವನು ಪತ್ತೆಯೇ ಇಲ್ಲದಂತಾದ. ಇದನ್ನೇ ಹಚ್ಚಿಕೊಂಡ ಮಾಲತಿಯ ತಾಯಿ "ಸೀತಕ್ಕ" ಮನೋಸ್ವಾಸ್ಥ್ಯ ಕಳೆದುಕೊಂಡು ಹೇಗೋ ತನಗಿರುವ ಓರ್ವಳೇ ಮಗಳನ್ನ ಸಾಕಿದ್ದಳು. ದಿನಗಳೆದಂತೆ ಮಾನಸಿಕ ಸ್ವಾಸ್ಥ್ಯ ಕಡಿಮೆಯಾಗುತ್ತಾ, ಕಡಿಮೆಯಾಗುತ್ತಾ ಅರೆ ಹುಚ್ಚಿಯಾಗಿಬಿಟ್ಟಳು. ತನ್ನಷ್ಟಕ್ಕೆ ತಾನೇ ಹಲುಬುವುದು, ಕುಳಿತಲ್ಲಿಯೇ ಕುಳಿತುಬಿಡುವುದು, ರಾತ್ರಿಯೆಲ್ಲಾ ಎಚ್ಚರವಾಗಿರುವುದು, ಹೀಗೆ 4–6 ವರ್ಷಗಳೇ ಕಳೆದು ಹೋದವು, ಸೀತಕ್ಕಳಿಗೆ ತವರೂರೂ ದೂರವಾಗಿತ್ತು. ತಂದೆ-ತಾಯಿಗಳ ಇಚ್ಛೆಯಿಲ್ಲದ ವರನನ್ನು ಹುಡುಕಿಕೊಂಡ, ತನ್ನ ಮಗಳಿಂದ ದೂರವಾಗಿದ್ದರೂ ಜಾತಿಯಲ್ಲಿ ಕೆಳಗಿನವನು ಎಂಬ ಭಾವನೆ ಅವರದಾಗಿತ್ತು. ಸಮಾಜ ನಮ್ಮನ್ನೇ ದುರುಗುಟ್ಟಿ ನೋಡುವುದೆಂಬ ಭಾವನೆಯಿಂದ ಮಗಳನ್ನೇ ವಿಷವೆಂದು ಬಗೆದು ದೂರವಿಟ್ಟುಬಿಟ್ಟರು. ಈ ಎಲ್ಲಾ ಅನುಭವಗಳಿಂದಲೂ ಸೋತು ಹೋದ ಸೀತಕ್ಕ ನಿಜ ಜೀವನದಲ್ಲಿ ಸುಖವನ್ನುಂಡದ್ದು ಕೆಲವು ದಿನಗಳು ಮಾತ್ರ.

ತಂದೆ-ತಾಯಿಗಳನ್ನು ದೂರ ಮಾಡಿದ್ದು, ಅವಳ ಜೀವನಕ್ಕೆ ಮಾರಕವಾಯಿತೆಂದೇ ಹೇಳಬೇಕು... ಸೀತಕ್ಕಳ ಮಗಳು 12–13 ವರ್ಷ ದಾಟಿರುವಾಗ ವಿಧಿ ಅವಳನ್ನ ಕಾಡಿಬಿಟ್ಟ. ಪಕ್ಕದ ರಾಮು ಮಾಸ್ತರರೂ ಈ ಹುಡುಗಿಯ ಬದುಕಿನ ಬಗ್ಗೆ ಚಿಂತಿಸುತ್ತಾ ಸೀತಕ್ಕಳನ್ನ ಅಸ್ಪತ್ರೆಗೆ ಸೇರಿಸಿದರು. ಅಸ್ಪತ್ರೆಯಲ್ಲಿ ಒಂದು ತಿಂಗಳಿಗಿಂತಲೂ ಹೆಚ್ಚಿನ ದಿನಗಳನ್ನ ಕಳೆದ ಸೀತಕ್ಕ ಮಿದುಳೊಡೆದು ಸತ್ತಳು. ಸಾವು ಹೇಗೆಂದು ಇನ್ನೂ ನೋಡಿರದ ಆ ಮುಗ್ಧ ಹೃದಯ ತತ್ತರಿಸಿ ಹೋಯಿತು. ದೇವರಿಗೆ

ಕೈ ಮುಗಿಯುತ್ತಿರುವಾಗ ಬೇತಾಳದ ಮುಖ ದರ್ಶನ ಆದಂತಾಗಿ ಮೈಯಲ್ಲೆಲ್ಲಾ ವಿದ್ಯುತ್ ಸಂಚಾರವಾಯಿತು. ಇದರಿಂದ ರಾಮು ಮಾಸ್ತರರು ಕೂಡ ಆ ಮುಗ್ಧ ಹೃದಯದ ಬಗ್ಗೆ ಚಿಂತಿಸುವಂತಾಯಿತು.

ಮನೆಯಲ್ಲಿಟ್ಟುಕೊಳ್ಳೋಣವೆಂದರೆ ಜಾತಿಯಲ್ಲಿ ಕೀಳು. ಬೆಳೆಯುತ್ತಿರುವ ಹುಡುಗಿ. ಕೆಲಸ ಮಾಡುವ ಸಾಮರ್ಥ್ಯ ಬಂದಿಲ್ಲ. ಮನೆಯಲ್ಲಿ ಇವುಗಳನ್ನು ಬಿಟ್ಟರೆ ಇಂದೋ ನಾಳೆಯೋ ಎಂದು ದಿನ ಎಣಿಸುತ್ತಿರುವ ಮೈಯೆಲ್ಲಾ ಸುಕ್ಕುಗಟ್ಟಿರುವ ಗಂಗಜ್ಜಿ...

ಅಜ್ಜನ ಮನೆಯ ಮುಖವನ್ನು ಕಂಡರಿಯದ ಮುಗ್ಧ ಹೃದಯದ ಬಗ್ಗೆ ರಾಮು ಮಾಸ್ತರರ ಕರುಳು ಚುರ್ ಎನ್ನುತ್ತಿತ್ತು. ಏನಾದರೂ ಆಗಲಿ ದೇವರು ನನಗೆ ನನ್ನ ಕುಟುಂಬಕ್ಕೆ ಒಳ್ಳೆಯದನ್ನೇ ಮಾಡುತ್ತಾನೆಂದು ತೀರ್ಮಾನಿಸಿ ದಿನಾಲು ಗಂಗಜ್ಜಿಯ ಮನೆಗೆ ಬಂದು, ಒಂದಿಷ್ಟು ಅನ್ನ-ಸಾರು, ತಿಂಡಿ-ತಿನಿಸು ಜೊತೆಗೆ 10-15 ರೂಪಾಯಿಗಳನ್ನು ಕೊಟ್ಟು ಹೋಗುತ್ತಿದ್ದರು ರಾಮು ಮಾಸ್ತರರು.

ಭೂಮಿಯನ್ನು ಬಿಟ್ಟು ಹೋಗುವ ಜೀವ ದೇಹ ಒಂದು ಕಡೆಗಾದರೆ ಕೆಲವೇ ವರ್ಷಗಳ ಹಿಂದೆ ಭೂಮಿಯನ್ನು ತುಳಿದು ಬಂದಿರುವ ಎಳೆಯ ಹೃದಯ ಇನ್ನೊಂದು ಕಡೆಗೆ. ಸಮಾಜ ಅವರನ್ನು ನಿರ್ಲಕ್ಷ್ಯತನದಿಂದ ದೂರವಿಟ್ಟು ಅವರ ಬದುಕಿಗೆ ಮಾರಕ ವಾಗುವ ರೀತಿಯಲ್ಲಿ ನೀತಿಯನ್ನು ರೂಪಿಸುವ ದುರ್ದೈವ ನೀತಿ ಇನ್ನೊಂದು ಕಡೆಗಾ ದರೆ ರಾಮು ಮಾಸ್ತರಿಗೇಕೆ ಇವರ ಉಸಾಬರಿ ಎಂದುಕೊಳ್ಳುವ ಪೋಲಿ ಹುಡುಗರ ಹೊಲಸು ಮಾತುಗಳು ಗಾಳಿಯಲ್ಲಿ ತೇಲಿ ಬರುತ್ತಿದ್ದವು.

ಶಿಕ್ಷಕ ವೃತ್ತಿಯಿಂದ ನಿವೃತ್ತಿಯನ್ನು ಹೊಂದಿರುವ ರಾಮು ಮಾಸ್ತರರೂ ಜೀವನ ದಲ್ಲಿ ಎಲ್ಲ ರೀತಿಯ ಅನುಭವವನ್ನು ಉಂಡವರು, ಅವರ ಆದರ್ಶಗಳಲ್ಲಿ ಯಾವುದೂ ಮಸಿ ಬಳಿದುಕೊಂಡಿರಲಿಲ್ಲ.

ಕಾಲ ಕಳೆದಂತೆ ಗಂಗಜ್ಜಿಯ ಮೊಮ್ಮಗಳು ದೊಡ್ಡವಳಾಗುತ್ತಿದ್ದಳು, 17-18 ವಯಸ್ಸಿನ ಈ ಬಾಲಕಿ ಸ್ವಲ್ಪ ವಿಚಾರಿಸುವ ಮಟ್ಟಕ್ಕೆ ಬಂದಿದ್ದಳು. ತನ್ನನ್ನು ನೋಡಿಕೊಂಡ ರಾಮು ಮಾಸ್ತರರನ್ನು ದೇವರೆಂದೇ ಭಾವಿಸಿದಳು. ಬೇಡವೆಂದರೂ ಅವರ ಮನೆಯ ಮುಸುರಿ ಬಳಿಯುವುದಕ್ಕೆ ಹೋಗುವಲ್ಲಿ ಗೈರಾಗದ ಮಾಲತಿ. ರಾಮು ಮಾಸ್ತರರ ಹೆಂಡತಿಯೂ ಚೆನ್ನಾಗಿ ನೋಡಿಕೊಂಡಿದ್ದರು. ಪತಿಯನ್ನೇ ಆಶ್ರಯಿಸಿ ಬಂದ ಆದರ್ಶ ಗುಣಗಳು ಮಸಿ ಬಳಿದುಕೊಳ್ಳುವುದಕ್ಕೆ ಸಾಧ್ಯವಿದೆಯೇ?

ಮಾಲತಿ ದೊಡ್ಡವಳಾದಾಗ ಎಣ್ಣೆ, ಅರಿಸಿನ ಹಚ್ಚಿದವರಿಲ್ಲ. ಸಿಹಿ ಹಂಚಿದವ ರಿಲ್ಲ. ಪಾಪ... ಮುಗ್ಧ ಮನಸ್ಸಿನ ಎಳೆಯ ಹೃದಯ ಅದ್ಹೇಗೆ ಇವಿಷ್ಟು ದಿನಗಳನ್ನ ಕಳೆಯಿತೋ ದೇವರೇ ಬಲ್ಲ. ಸುಂದರವಾದ ನೀಳ ದೇಹವನ್ನು ಹೊಂದಿದ ಮಾಲತಿಯು

ಮುಖದಲ್ಲಿ ರಾಕಾಶಶಾಂಕನ ಕಾಂತಿ ತುಂಬಿತ್ತು. ಕೃತಕವಾಗಿ ತಯಾರಿಸಿದ ಸೌಂದರ್ಯದ ಸುಗಂಧದ ಕ್ರೀಮುಗಳಿಲ್ಲ, ಪೌಡರ್‌ಗಳಿಲ್ಲ, ಲಿಪ್‌ಸ್ಟಿಕ್‌ಗಳಾಗಲಿ ಕಾಂತಿ ತುಂಬುವ ಶ್ರೇಷ್ಠ ಗುಣಮಟ್ಟದ ಸಾಬೂನುಗಳಿಲ್ಲ. ಆದರೂ ನಿಸರ್ಗ ದೇವತೆ ಅವಳ ದೇಹದಲ್ಲಿ ಕಾಂತಿ ತುಂಬಿದ್ದು ನಿಸರ್ಗ ನಿಯಮದಂತೆ.

ಇದ್ದಕ್ಕಿದ್ದಂತೆ ಮಾಲತಿ ಮಾನಸಿಕ ಪರಿವರ್ತನೆ ಕಂಡಳು. ರಾಮು ಮಾಸ್ತರಿಗೆ ಹೇಳದೇ ಕದ್ದು ಜಿದ್ದು ಅಜ್ಜಿಗೂ ಹೇಳದೇ ಜಾತ್ರೆಗೆ ಸಿನೇಮಾಗೆ ಹೋಗುವುದು ಅವಳ ಹವ್ಯಾಸವಾಯಿತು. ಹತ್ತಿರದ ಅಗ್ರಹಾರದಲ್ಲಿ ನಡೆಯುವ ಗಣಪತಿ ಉತ್ಸವಕ್ಕೆ ಗೆಳತೆಯರೊಡಗೂಡಿ ನಡೆದೇ ಬಿಟ್ಟಳು. ಇವಳ ಬಳಿಯಲ್ಲಿದ್ದ 30 ರೂಪಾಯಿಗಳಲ್ಲಿ 3 ರೂಪಾಯಿಗಳನ್ನ ಕೊಟ್ಟು ಕರ್ನಾಟಕ ರಾಜ್ಯ ಲಾಟರಿ ತೆಗೆದುಕೊಂಡಳು. ಗೆಳತಿಯರು ತಿನಿಸಿದ ತಿಂಡಿ-ತಿನಿಸುಗಳಲ್ಲಿ ಕೆಲವನ್ನು ಅಜ್ಜಿಗೂ ತಂದು ಕೊಟ್ಟಳು.

ಮೊಮ್ಮಗಳ ಕೈ ತುತ್ತು ತಿನ್ನುವ ಸ್ಥಿತಿ ಬಂದ ಗಂಗಜ್ಜಿ ನೊಂದು ನೊಂದು ಒಂದು ದಿನ ಮಾಲತಿ ರಾಮು ಮಾಸ್ತರ ಮನೆಗೆ ಹೋದಾಗ ಪಕ್ಕದ ಮನೆಯ ಮಾಸ್ತಿಯನ್ನು ಕರೆದು ನನ್ನ ಮೊಮ್ಮಗಳ ಬಗ್ಗೆ ತುಸು ಕಾಳಜಿ ವಹಿಸು ಮಗಾ ಎಂದು ಕೊನೆಯುಸಿರೆಳೆದಳು. ಕೊನೆಯುಸಿರೆಳೆವಾಗ ದೇವಾ ಈ ಭೂಮಿಗೆ ಬಂದ ಮ್ಯಾಗ ಮಗನನ್ನ ಕಳಕೊಂಡೆ, ಸೊಸೆನ ಕಳಕೊಂಡೆ ಇನ್ನುಳ್ಕೊಂಡಿರೋ ನನ್ನ ಮೊಮ್ಮಗಳಿಗೊಂದು ಲಾಟರಿ ಹತ್ತುವಂಗಾದ್ರೂ ಕರುಣೆ ತೋರಪ್ಪಾ... ನನ್ನ ಮೊಮ್ಮಗಳನ್ನ ನೋಡ್ಕೋಳ್ಳೊ ಜೀವಾನೇ ಇದ್ದಾಂಗಿಲ್ಲ. ಹ್ಯಾಂಗಾರ ಮಾಡಿ ನನ್ನ ಕಂದನನ್ನ, ನನ್ನ ಕುಟುಂಬದ ಕುಡಿ ಚಿಗುರುವಂಗ್ಹ ಮಾಡಪ್ಪ ಅಂತ ಉಸಿರು ಬಿಟ್ಟಿದ್ದಳು.

ರಾಮು ಮಾಸ್ತರರೂ ದಿನಾ ದಿನಾ ಗಂಗಜ್ಜಿಯ ಮನೆಯ ಕಡೆ ಕಾಳಜಿ ವಹಿಸಿದ್ದರು. ಮಾಲತಿ, ಮಾಸ್ತರರ ಮನೆಯ ಹತ್ತಿರದಲ್ಲಿದ್ದ ಒಂದು ಹಳೆಯ ಮನೆಯ ಒಂದು ಕೋಣೆಯಲ್ಲಿ ಉಳಿದುಕೊಳ್ಳುವಂತೆ ವ್ಯವಸ್ಥೆ ಮಾಡಿದರು.

ಒಂದು ದಿನ ಮಾಲತಿಯೇ ಮಾಸ್ತರರ ಬಳಿ ಬಂದು, ಒಂದು ಚೀಟಿಯನ್ನು ತೋರಿಸುತ್ತಾ ಇದು ತಾಗಿದೆಯೇ ನೋಡಿ ಎನ್ನುತ್ತಾ, ಹೆದರುತ್ತಾ ಅವರ ಕೈಗೆ ಇತ್ತಳು. ಮಾಸ್ತರರು ನಗುತ್ತಾ ಇದನ್ನೆಲ್ಲಾ ಏಕೆ ತೆಗೆದುಕೊಂಡೆ ..? ಇವೆಲ್ಲಾ ಅದೃಷ್ಟವಂತರರಿಗೆ ಮಾತ್ರ ಹತ್ತುತ್ತವೆ ಅಂತ ಮುಸಿ ಮುಸಿ ನಕ್ಕು ಕನ್ನಡಕ ಹುಡುಕಿಕೊಂಡು ಪೇಪರ್ ನೋಡತೊಡಗಿದರು.

ದೇವರ ದಯೆ, ಗಂಗಜ್ಜಿಯ ಆಸೆ ಸುಳ್ಳಾಗಲಿಲ್ಲ. ಮಾಲತಿ ತೆಗೆದುಕೊಂಡ ಲಾಟರಿ 50 ಸಾವಿರ ರೂಪಾಯಿ ಹೊಡದೇ ಬಿಟ್ಟಿತು. ಅಜ್ಜಿ ಸತ್ತು ನಾಲ್ಕು ದಿವಸ ಕಳೆಯಲಿಲ್ಲ... ಅವಳ ವೈಕುಂಠ ಸಮಾರಾಧನೆಯ ಕಾರ್ಯ ಹೇಗೆ ಮಾಡಬೇಕು...? ಹೇಗೆ ಮಾಡುವುದು ಯಾರನ್ನು ಕರೆಯುವುದು...? ಎನ್ನುವುದರಲ್ಲೇ ನಾಲ್ಕು ದಿವಸ

ಗಳನ್ನು ಕಳೆದ. ರಾಮು ಮಾಸ್ತರರೂ ಮೊಮ್ಮಗಳಾದ ಮಾಲತಿಯನ್ನೂ ಗೋಕರ್ಣಕ್ಕೆ ಕರೆದುಕೊಂಡು ಹೋಗಿ ಮಾಡಿಸಬೇಕೆಂದು ತೀರ್ಮಾನಿಸಿ ಅದಕ್ಕೆ ಬೇಕಾಗಬಹುದಾದ 4–5 ಸಾವಿರ ಕೂಡಿಸಿದರು. ಅಷ್ಟರಲ್ಲೇ ಲಾಟರಿ ಹತ್ತಿತು. ಇವಳು ಅದೃಷ್ಟವಂತೆ ಇನ್ನಾದರೂ ಇವಳ ಬಾಳಿನಲ್ಲಿ ಬೆಳಕು ಬರಬಹುದೆಂಬ ಆಶಾಭಾವನೆಯಿಂದ ಗಂಗಜ್ಜಿಯ ವೈಕುಂಠ ಸಮಾರಾಧನೆ ಮುಗಿಸಿದರು.

ನೀನು ತೆಗೆದುಕೊಂಡ ಲಾಟರಿಗೆ 50 ಸಾವಿರ ರೂಪಾಯಿ ಹತ್ತಿದೆ. ಇದನ್ನು ನಿನ್ನ ಹೆಸರಲ್ಲೇ ಇಟ್ಟುಕೊಳ್ಳುವಂತೆ ಮಾಡಿಸಿಕೊಡುತ್ತೇನೆ. ಹುಬ್ಬಳ್ಳಿಗೆ ಹೋಗಿ ತೆಗೆದುಕೊಂಡು ಬರಬೇಕೆಂದು ಅವಳನ್ನ ಕರೆದುಕೊಂಡು ಹೋಗಿ 50 ಸಾವಿರ ರೂಪಾಯಿಗಳನ್ನು ಮಾಲತಿಗೆ ದಕ್ಕುವಂತೆ ಮಾಡಿಕೊಟ್ಟವರು ರಾಮು ಮಾಸ್ತರರು. ಈ ವೇಳೆಗಾಗಲೇ 70ರ ಗಡಿದಾಟಿದ್ದು ಸಿಹಿ ಮೂತ್ರ ಕಾಯಿಲೆಯಿಂದ ನರಳುತ್ತಿದ್ದು ಇದ್ದಕ್ಕಿದ್ದಂತೆ ರಕ್ತದೊತ್ತಡ ಹೆಚ್ಚಾಗಿ ಒಂದು ದಿನ ಕೊನೆಯುಸಿರೆಳೆದರು.

ಲಾಟರಿ ಹತ್ತಿದ ಸುದ್ದಿ ಊರೆಲ್ಲಾ ಹಬ್ಬಿ ಮಾಲತಿಯ ಹಿಂದೆ ಮುಂದೆ ತಿರುಗುತ್ತಿದ್ದ ಡ್ರೈವರ ಸುಧಾಕರನ ತಲೆಯಲ್ಲಿ ಹಲವಾರು ಕನಸುಗಳು ಬಂದು ಹೋದವು. ರಾಮು ಮಾಸ್ತರರ ಹೆಂಡತಿಯ ಕಾಲಿಗೆ ಬಿದ್ದರೆ ಚಂದ್ರಮುಖಿ ದಕ್ಕುತ್ತಾಳೆಂದು ಅವರ ಪಾದವನ್ನು ಹಿಡಿದಾಯಿತು. ಹಿಂದೂ ಮುಂದೂ ನೋಡದ ಈ ಅಮ್ಮ ಮಾಲತಿಯನ್ನು ಅವನ ಕೈಗಿತ್ತು ಜವಾಬ್ದಾರಿ ತಪ್ಪಿಸಿಕೊಂಡರು.

ಶಾಲೆಯ ಮೆಟ್ಟಿಲನ್ನೂ ತುಳಿಯದ ಮಾಲತಿ ಶಿಕ್ಷಕರ ಮುಖವನ್ನು ನೋಡದ ಸುಧಾಕರ, ಬದುಕಿನಲ್ಲಿ ಸತಿ ಪತಿಗಳಾದದ್ದು ಒಂದು ದುರ್ದೈವ ಲೀಲೆಯೇ ಸರಿ. ಕೆಲಸವಿಲ್ಲದ ಸುಧಾಕರ ದಿನಗಳೆದಂತೆ ಓ. ಸಿ. ಆಡುವುದು, ಕುಡಿಯುವುದನ್ನ ಹೆಚ್ಚಿಸಿಕೊಂಡು, ಹೆಂಡತಿಯ ದುಡ್ಡಿನಿಂದ ತೃಷೆ ತೀರಿಸಿಕೊಂಡ.

ಕರ್ನಾಟಕ ಬಂದ್ ಇರುವ ದಿನ ರಿಕ್ಷಾ ಮಾಲೀಕರ-ಚಾಲಕರ ನಡುವೆ ನಡೆದ ಜಗಳದಲ್ಲಿ ರಿಕ್ಷಾ ಮಾಲಿಕ ಸೈಯದ್ ಮುಲ್ಲಾ ಕೊಲೆಯಾದ ಅಮಲಿನಿಂದ ತಪ್ಪಿಸಿಕೊಳ್ಳಲಾಗದ ಸುಧಾಕರ ಜೈಲಿನ ಕಂಬಿ ಎಣಿಸಿದ. ಕೋರ್ಟು ವಿಚಾರಣೆಯಲ್ಲಿ ಆಜೀವ ಶಿಕ್ಷೆಗೆ ಗುರಿಯಾದ ಸುಧಾಕರನ ಸುದ್ದಿಯಿಂದ, ಬದುಕಿನಲ್ಲಿ ಯಾವ ಸುಖವನ್ನು ಅನುಭವಿಸದೇ ಉರುಲು ಹಾಕಿಕೊಂಡು ಈ ಭೂಮಿಯನ್ನ ತೊರೆದು ಹೋದಳು.

— ಸಮಾಪ್ತಿ —

— ಡಿ. ಎನ್. ನಾಯಕ್

# ಸುಕೃತ ಫಲ

ಯಾವ ಜನುಮದ ಸುಕೃತ ಫಲವೊ
ಇಂದು ಎನಗೆ ಲಭಿಸಿತು
ಯಾವ ಜನುಮದ ಪುಣ್ಯ ಕ್ಷಿತಿಜವೊ
ಈ ವಿದ್ಯಾಲಯ ದೊರಕಿತು. ॥೧॥

ಭೇದ ಭಾವವೆ ಇರುವದಿಲ್ಲಾ
ಜಾತಿ ಮತಗಳ ಭೇದವಿಲ್ಲಾ
ಒಂದೇ ಬಂದ ಮಕ್ಕಳೆಲ್ಲಾ
ಒಂದೇ ವಿದ್ಯಾಲಯದ ವಿದ್ಯಾರ್ಥಿಗಳೆಲ್ಲಾ ॥೨॥

ವಿದ್ಯೆಗೇನು ಕೊರತೆ ಇಲ್ಲಾ
ವಿದ್ಯಾದೇವತೆ ನೆಲೆಸಿಹಳಲ್ಲಾ
ನಾವು ಮಾಡಿದ ತಪ್ಪನ್ನೆಲ್ಲಾ
ನಮ್ಮ ಗುರುಗಳು ಕ್ಷಮಿಸುವರೆಲ್ಲಾ ॥೩॥

ವಿದ್ಯಾರ್ಜನೆಗೆ ಬಂದ ವಿದ್ಯಾರ್ಥಿಗಳೆಲ್ಲಾ
ಬಂದು ತೃಪ್ತಿಯ ಪಡೆವರಲ್ಲಾ
ಇದಕೆ ಸಾಟಿ ಬೇರೆ ಇಲ್ಲಾ
ದಿನಕರರ ಸ್ಮರಣೆ ಮಾಡಿರೆಲ್ಲಾ ॥೪॥

ದಿನಕರರೆಲ್ಲ ದೊರೆಯುವದಿಲ್ಲಿ
ನಮ್ಮ ಯಾ ಸ್ಮರಣೆಯಲ್ಲಿ
ವಿದ್ಯಾಲಯವೇ ದಿನಕರರಿಲ್ಲಿ
ನಮ್ಮೆಲ್ಲರ ದೃಷ್ಟಿಯಲ್ಲಿ ॥೫॥

ದಿನಕರರೇ ಇರುವದಿಲ್ಲಿ
ಕಟ್ಟಡಗಳ ರೂಪದಲ್ಲಿ
ಶಾರದಾಂಬೆ ನೆಲೆಸಿಹಳಿಲ್ಲಿ
ಗ್ರಂಥಾಲಯದ ಪುಸ್ತಕಗಳಲ್ಲಿ ॥೬॥

— ಮಹೇಶ ವಿ. ನಾಯ
ದ್ವಿತೀಯ ಪಿ. ಯು.

# ಸ್ತ್ರೀ ಶಿಕ್ಷಣ

ನಾವು ಭಾರತದ ನಾಗರಿಕರು. ಅದರಲ್ಲಿಯೂ ಸ್ವತಂತ್ರ ಭಾರತದ ನಾಗರಿಕರು. ಇಷ್ಟೇ ಅಲ್ಲ; ಪ್ರಜಾರಾಜ್ಯದ ಅಡಿಗಲ್ಲುಗಳು. ಶಿಕ್ಷಣವನ್ನು ಹೊಂದುವುದೇ ಮಾನವನ ಲಕ್ಷಣ. ಮಾನವರೆಂದ ಬಳಿಕ, ಆ ಮಾನವರ ಮಾಲಿಕೆಯಲ್ಲಿ "ಸ್ತ್ರೀ"ಯರ ಪ್ರವೇಶವು ಇರುತ್ತದೆ. ಆದ್ದರಿಂದ ಸ್ತ್ರೀಯರಿಗೂ ಶಿಕ್ಷಣ ಅವಶ್ಯವಾಗಿ ಬೇಕೇ ಬೇಕು,

ಪ್ರತಿಯೊಬ್ಬ ಮಾನವ ಜೀವಿಯೂ ಶಾರೀರಿಕ, ಮಾನಸಿಕ ಮತ್ತು ನೈತಿಕ ವಿಕಾಸವನ್ನೇ ಇಚ್ಛಿಸುವದು. ಈ ವಿಕಾಸಕ್ಕೆ ಅನುಕೂಲವಾಗುವಂಥ ಸಾಧನವೂ ಶಿಕ್ಷಣವಲ್ಲದೇ ಬೇರೊಂದಿಲ್ಲ. ಶಿಕ್ಷಣವಿಲ್ಲದೇ ಈ "ತ್ರಿವೇಣಿ" ಸಂಗಮದಿಂದೊಡಗೂಡಿದ (ಶಾರೀರಿಕ, ಮಾನಸಿಕ, ನೈತಿಕ) ವಿಕಾಸವನ್ನು ಬಯಸಿದರೆ, ಬಂಜೆ ಭೂಮಿಯಲ್ಲಿ ಉತ್ತಮವಾದ ಬೆಳೆಯನ್ನು ಅಪೇಕ್ಷಿಸಿದಂತೆಯೆ! ಅಡಿಗೆ ಮಾಡುವುದಷ್ಟೇ ಸ್ತ್ರೀಯರ ಕಾರ್ಯವೆಂದು ಪುರುಷರು ತಿಳಿದುಕೊಂಡಿದ್ದರೆ ಅದು ಸ್ವಾರ್ಥವೆನಿಸುವುದು. ಅಲ್ಲದೇ ಸ್ವತಂತ್ರ ಭಾರತದ ನಾಗರಿಕರೆನಿಸಿಕೊಳ್ಳುವ ಪುರುಷನಿಗೆ ಇದು ಭೂಷಣವಲ್ಲ.

ಸ್ತ್ರೀಯು ಬಾಲಕರ ರಕ್ಷಣ, ಶಿಕ್ಷಣಗಳಿಂದ ಜಗತ್ತನ್ನೇ ತೂಗಿಸುವ ಮಹಾ ವಿಭೂತಿಗಳ ಜನನಿಯು! ಅವಳೇ ಅಶಿಕ್ಷಿತಳಾಗಿದ್ದರೆ ಮುಂದಿನ ಪೀಳಿಗೆಯ ಗತಿಯೇನು? ಅಲ್ಲದೇ ಇಂದು ತೊಟ್ಟಿಲನ್ನು ತೂಗುವ ಕೈಗಳೇ ನಾಳೆ ಜಗತ್ತನ್ನೇ ತೂಗಬಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದ್ದರಿಂದ ಸ್ತ್ರೀ ಶಿಕ್ಷಣ ಒತ್ತಾಯದ್ದಾಗಿ ಮಾಡುವುದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ ಸಾಗರದಲ್ಲಿ ಸ್ತ್ರೀ ಪುರುಷರಿಬ್ಬರೂ "ನಾವಿಕರು" ಜೀವನವೇ ನೌಕೆ. ಪ್ರಜಾರಾಜ್ಯವೇ ಮಹಾಸಾಗರ, ಈ ಸಂಸಾರದಲ್ಲಿ ಜೀವನವೆಂಬ ನೌಕೆಯನ್ನು ತೂಕದಿಂದ ನಡೆಸುವ ನುರಿತ ನಾವಿಕರಿದ್ದರೇನೇ ಜೀವನವು ಶಾಂತಿ ಪಥದಲ್ಲಿ ಸಾಗುವುದು. ತನ್ನೀ ಜೀವನವನ್ನು ಶಾಂತಿ ಪಥದಿಂದ ಸಾಗಿಸಬೇಕೆಂದು ಎಡೆಬಿಡದೆ ಚಿಂತಿಸುತ್ತಿರುವ ಪುರುಷನು ತಾನೊಬ್ಬನೇ ಸುಶಿಕ್ಷಿತನಾದರೆ, ಸಾಧ್ಯವಿಲ್ಲ. ತನ್ನ ಅರ್ಧಾಂಗಿಯೂ ಸುಶಿಕ್ಷತೆಯಾಗಿರಬೇಕೆಂಬುದನ್ನು ಮರೆಯಕೂಡದು.

ಸ್ತ್ರೀಯರಿಗೆ ತನ್ನ ಜೀವನವೆಂಬ ಬಾಳ ನೌಕೆಯನ್ನು ಶಾಂತಿಯೆಂಬ ಕಡಲಿನಲ್ಲಿ ಸುಗಮವಾಗಿ ಸಾಗಿಸಲಿಕ್ಕೆ ಯೋಗ್ಯವಾಗುವ ಶಿಕ್ಷಣವೇ ಬೇಕು. ಈ ಸಾಹಿತ್ಯಾಕಾಶದಲ್ಲಿ ಸ್ವ-ಪ್ರಭೆಯಿಂದ ಮಿನುಗುವ ಧ್ರುವತಾರೆಯಂತಿರುವ ಕೆ ವ್ಹಿ. ಪುಟ್ಟಪ್ಪನವರು ಅಂದಂತೆ "ದೋಣಿ ಸಾಗಲಿ ಮುಂದೆ ಹೋಗಲಿ. ದೂರ ತೀರವ ಸೇರಲಿ".

ಈ ಜೀವನವೆಂಬುದೇ ಒಂದು ದೋಣಿ. ಈ ದೋಣಿಯನ್ನು ನಡೆಸುತ್ತಿರುವಾಗ ಎಡರುತೊಡರುಗಳನ್ನು ದಾಟಿ ಮುಟ್ಟಬೇಕಾದ ಗುರಿಯನ್ನು ಮುಟ್ಟಲು ನುರಿತ ನಾವಿಕರಿಂದಲೇ ಆ ಜೀವನವೆಂಬ ದೋಣಿಯು ಬಾಳದಂಡೆಯನ್ನು ಮುಟ್ಟಲು ಸಾಧ್ಯವು. ಆದ್ದರಿಂದ ಜೀವನವೆಂಬ ದೋಣಿಯನ್ನು ಸಾಗಿಸುತ್ತಿರುವ ಸ್ತ್ರೀ ಪುರುಷರಿಬ್ಬರೂ ಸುಶಿಕ್ಷಿತರಾಗಿರಬೇಕು. ಸ್ತ್ರೀಯು ಗೃಹಕೃತ್ಯದ ಮೇಲ್ವಿಚಾರಕಳು. ಗೃಹಕೃತ್ಯಕ್ಕೆ ಯೋಗ್ಯವಾಗುವ ಶಿಕ್ಷಣ ಅವಳಿಗೆ ಅಗತ್ಯವಾಗಿ ಬೇಕು. ಅಂದರೆ ಓದು, ಬರಹ, ಲೆಕ್ಕ, ಆರೋಗ್ಯದ ಮಹತ್ವ, ಪಾಠಶಾಸ್ತ್ರ, ಶಿಶುಸಂಗೋಪನ, ಪ್ರಥಮ ಚಿಕಿತ್ಸೆ, ವೀರ ಸ್ತ್ರೀ ಪುರುಷರ ಮತ್ತು ಪತಿವ್ರತೆಯರ ಚರಿತ್ರೆಗಳ ಬಗ್ಗೆ ಅವಳಿಗೆ ಜ್ಞಾನವಿರಬೇಕು. ಪುರುಷನು ದುಡಿದು ತಂದಂಥ ಜೀವನದ ಸಲಕರಣೆಗಳನ್ನು ಸಜ್ಜಾಗಿಯೂ, ಸುವ್ಯವಸ್ಥಿತವಾಗಿಯೂ ಕಾಯ್ದುಕೊಳ್ಳುವುದು ಸ್ತ್ರೀಯರ ಮುಖ್ಯ ಕೆಲಸ. ಮನೆಯ ಕೆಲಸಗಳೆಲ್ಲವೂ ಸ್ತ್ರೀಯರ ಮೇಲೆ ಹೆಚ್ಚಾಗಿ ಬೀಳುವುದು. ಅವುಗಳನ್ನು ಯಶಸ್ವಿ ರೀತಿಯಿಂದ ಪೂರ್ಣಗೊಳಿಸಿ, ಯಜಮಾನನಿಗೆ ಸದಾ ಸಹಾಯಕಳಾಗಿಯೂ, ಸಹಕಾರಿಯಾಗಿಯೂ, ಪತಿ ಉತ್ಸಾಹಕ್ಕೆ ಅನುಕೂಲತೆಯಾಗಿರುವುದು ಸ್ತ್ರೀಯರ ಕರ್ತವ್ಯವಾಗಿದೆ. ಇಂಥ ಅದ್ವಿತೀಯ ಕಾರ್ಯಗಳನ್ನೂ ಯಶಸ್ವಿಯಾಗಿ ಸಾಗಿಸಲಿಕ್ಕೆ ಸುಶಿಕ್ಷಿತ ಸ್ತ್ರೀಯರು ಅವಶ್ಯವಾಗಿ ಬೇಕು. ಈ ಎಲ್ಲ ಅನುಕೂಲತೆಗಳನ್ನೂ ಅಪೇಕ್ಷಿಸುವ ಪುರುಷನು ಸ್ತ್ರೀ ಶಿಕ್ಷಣಕ್ಕೆ ವಿರೋಧಿಯಾದರೆ, ಅದೊಂದು ನಮ್ಮ ಹಿಂದೂ ಸಮಾಜಕ್ಕೆ "ಕಪ್ಪುಕಲೆ" ಎಂದು ಹೇಳಬಹುದು.

ನಮ್ಮ ದೇಶದಲ್ಲಿ ಪುರುಷರಂತೆ ಕಿತ್ತೂರು ರಾಣಿ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಝಾನ್ಸಿರಾಣಿ ಲಕ್ಷ್ಮಿಬಾಯಿ ಮೊದಲಾದ ಸ್ತ್ರೀಯರು "ನಾರಿ ಶಿರೋಮಣಿ"ಗಳೆಂದು ಖ್ಯಾತಿವೆತ್ತಿ ಮೆರೆದಿರುವರು. ಸರೋಜಿನಿ ನಾಯಿಡು, ವಿಜಯಲಕ್ಷ್ಮಿ ಪಂಡಿತ್ ಮುಂತಾದವರು ಭಾರತದ ಕೀರ್ತಿಯನ್ನು ಬೆಳಗಿದರು. ಇಂದಿರಾಗಾಂಧಿಯವರು ಭಾರತದ ಪ್ರಧಾನರಾಗಿ ಜಗತ್ತಿನ ಪ್ರಮುಖರ ಮಾಲಿಕೆಯಲ್ಲಿ ಮೆರೆಯುತ್ತಿರುವರು. ಇವೆಲ್ಲ ಭಾರತಮಾತೆಗೆ ಹೆಮ್ಮೆಯ ಮಾತೇ ಸರಿ.

ಪುರುಷನು ಸ್ತ್ರೀಯರಿಗೆ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂಥ ಸನ್ನಿವೇಶಗಳನ್ನು ಒದಗಿಸಿಕೊಡಬೇಕು. ಸಾರ್ವಜನಿಕ ಕಾರ್ಯಪ್ರವೃತ್ತನಾಗಿ ಪರಿವರ್ತಿಸುವ ದಿವ್ಯೌಷಧಿಯೆಂದರೆ ಶಿಕ್ಷಣ. ಸ್ತ್ರೀಯರಿಗೆ ಶಿಕ್ಷಣದೊರೆಯದೇ ಹೋದಲ್ಲಿ ಪುರುಷನು ತನ್ನ ಉನ್ನತಿಗೂ ಶ್ರೇಯಸ್ಸಿಗೂ ತಾನೇ ಅಡ್ಡಿ ಮಾಡಿಕೊಂಡಂತಾಗುವುದು. ಆದ್ದರಿಂದ ಸ್ತ್ರೀಯರಿಗೆ ಶಿಕ್ಷಣವು ಅಗತ್ಯವಾಗಿರಬೇಕು

" ಜೈ ಹಿಂದ್ "

— ಮಮತಾ ಎನ್. ನಾಯ್ಕ

# ಸೀಮೆ ರಾಜು

ಇದಕ್ಕೂ ಮೊದಲು ಅವನ ತಂದೆ ಕೋಳಿಯುಕಾಳಿಗ (ಅಂಕ)ಕ್ಕೆ ಹೋಗುತ್ತಿದ್ದ. ಅಲ್ಲಿ ಏನಾದರೂ ಪೋಲಿಸರು ಬಂದರೆ ದನದ ಕೊಟ್ಟಿಗೆಯಲ್ಲೋ ಅಥವಾ ಇನ್ನಿತರ ಕಡೆಗಳಲ್ಲಿಯೋ ಅಡಗಿಕೊಂಡು ತಪ್ಪಿಸಿಕೊಳ್ಳುತ್ತಿದ್ದ. ಒಂದು ದಿನ ಕೋಳಿಯು ಕಾಳಗಕ್ಕೆ ಇವನು ಹೋದಾಗ ಪೋಲಿಸರ ಜೀಪು ಬಂದೇ ಬಿಡ್ತು. ಆಗ ಈತ ಅಲ್ಲಿಯೇ ಇದ್ದ ಯಾರದೋ ಗದ್ದೆಯಲ್ಲಿ ಇಳಿದು ನೀರನ್ನು ಹಾಯಿಸುತ್ತಾ "ಹಾಳಾದ ನನ್ ಹೆಂಡ್ತಿಗೆ ಹೇಳಿದ್ರ ಕೇಳೊಲ್ಲ. ಈಗ ನೋಡು ನೀರು ಎಷ್ಟು ತುಂಬಿದೆ ಗದ್ದೆಲಿ" ಎಂದು ಗೊಣಗುತ್ತಾ ನೀರು ಹಾಯಿಸುತ್ತಿದ್ದ. ಈತನನ್ನು ಪೋಲಿಸರು ಲೆಕ್ಕಿಸದೇ ನಡೆದೇ ಬಿಟ್ಟರು. ಪೋಲಿಸರು ಬಿಟ್ಟುಹೋದಾಗ ಇವನಿಗೆ ಎಲ್ಲಿಲ್ಲದ ಸಂತೋಷ, ಅಂತೂ ತಪ್ಪಿಸಿಕೊಂಡ. ಆದರೂ ಕೋಳಿ ಅಂಕಗಳಿಗೆಹೋಗುವುದನ್ನು ತಪ್ಪಿಸುತ್ತಿಲ್ಲ ವಾಗಿತ್ತು,

ಅತ್ತ ಮಗ ರಾಜು, ಶಾಲೆ ಕಲಿಯಹತ್ತಿದ. ಎಲ್ಲಿ ಜೂಜು ನಡೆಯುತ್ತದೆಯೋ ಅಲ್ಲಿ ಈ ರಾಜು ಹಾಜರ್ ಆಗುತ್ತಿದ್ದ. ಒಂದು ದೀಪಾವಳಿಯ ಶುಭ ದಿನದಲ್ಲಿ ಊರಿನಲ್ಲಿಯೇ ಜೂಜು ಪ್ರಾರಂಭವಾಗಿತ್ತು. ಅಲ್ಲಿ ಈತನಿಗೆ ಹಾಗೂ ಇತರರಿಗೆ ವ್ಯವಸ್ಥಿತವಾಗಿ ಶೀಲ್ ಮಾಡಿದ ಕೊಟ್ಟೆಯೊಂದಿಗೆ ಮೊಟ್ಟೆಯೂ ದೊರಕಿಸಿ ಕೊಡುತ್ತಿದ್ದರು. ಅಂದು ಅವರಲ್ಲಿಯೇ ಮಾತು ಮಾತಿಗೆ ಜಗಳ ಪ್ರಾರಂಭವಾಗಿ ಆ ಜಗಳ ವಿಶಾಲವಾಗಿ ಹರಡಿ, ಊರ ತುಂಬೆಲ್ಲಾ ಗದ್ದಲವೇ ತುಂಬಿತ್ತು. ಯಾರೋ ಯಾರಿಗೆ ಜಗಳ ಪ್ರಾರಂಭವಾಗಿದ್ದು ಆದರೆ ಪೆಟ್ಟು ಬಿದ್ದದ್ದು ಈ ರಾಜುವಿಗೆ. ಬೇರೆಯವರ ಜಗಳ ತನ್ನ ಮೇಲೆ ಹೊರಿಸಿಕೊಂಡಿದ್ದೇ ಈ ಪೆಟ್ಟು ತಿನ್ನಲು ಕಾರಣವಾಯಿತು.

ಅಂತೂ ಇಂತೂ ಯಮ ಸಾಹಸದಿಂದ ಮೆಟ್ರಿಕ್ಯುಲೇಶನ್ ಪಾಸು ಮಾಡಿದ ಈ ರಾಜು, ತಂದೆಗೆ ತಾನು ಶಿಕ್ಷಣ ಮುಂದುವರೆಸುತ್ತೇನೆಂದು ಹೇಳಿದ. ತಂದೆ ಅದಕ್ಕೆ ಅನುಮತಿಯನ್ನು ಕೊಟ್ಟು ಮಗನನ್ನು ಕಾಲೇಜಿಗೆ ಸೇರಿಸಿದ. ರಾಜು ಕಾಲೇಜು ಸೇರಿದ ಒಂದು ವರ್ಷದಲ್ಲಿ ಆತನ ತಂದೆಯೂ ತೀರಿಕೊಂಡ. ಆದರೂ ಕಾಲೇಜು ಕಲಿಯುವುದು ಬಿಡಲಿಲ್ಲ. ಕಾಲೇಜು ಓದುತ್ತಿದ್ದಾಗ ಒಂದು ಹುಡುಗಿಯನ್ನು ಕಣ್ಣು ಹೊಡೆದನೋ ಏನೋ. ಅವಳ ಮನಸ್ಸನ್ನು ಗೆದ್ದು ಪ್ರೀತಿಸಹತ್ತಿದ. ದಿವಸವೂ ತಾಯಿ ಮಗನು ಬರುವ ಹೊತ್ತಿಗೆ ಅಡುಗೆ ಮಾಡಿಟ್ಟು ಬರಹಾಯುತ್ತಿದ್ದಳು.

ಒಂದು ದಿನ ಮಗನು ತಾನು ಪ್ರೀತಿಸಿದ ಹುಡುಗಿಯೊಂದಿಗೆ ಬರುತ್ತಿದ್ದುದನ್ನು ತಾಯಿ ದೂರದಿಂದಲೇ ನೋಡಿದಳು. ಯಾರೋ ಪರಿಚಯಸ್ಥರಿರಬೇಕೆಂದು ನಂಬಿ

ಕೊಂಡಳು. ಆದರೆ ಮಗ ಅವಳನ್ನು ಮನೆಯವರೆಗೂ ತರೆತಂದುದನ್ನು ನೋಡಿ ತಾಯಿ ಬೆಕ್ಕಸ ಬೆರಗಾದಳು. ಖಿನ್ನ ಧ್ವನಿಯಲ್ಲಿ 'ತಮ್ಮಾ' ಅಂದಳು. ಅವಳ ಮಾತನ್ನು ಲಕ್ಷಿಸದೆ ತಾನು ಕರೆದುಕೊಂಡು ಬಂದ ಹುಡುಗಿಗೆ ನೆಂಟರಿಗೆ ಉಪಚರಿಸುವಂತೆ ಹಾಸಿಗೆ ಹಾಕಿ ಕೂತ್ಕೋ ಎಂದ. ಅಷ್ಟೆ ಅಲ್ಲ, ಆಸರಿಗೆ ಎಂತಲೂ ಕೇಳಿದ. ತಾನೆ ಬಡಿಸಿ ಊಟ ಮಾಡಿಸಿದ. ನಂತರ ಅವಳ ಊರಿಗೆ ಕಳುಹಿಸಿಕೊಟ್ಟ. ತಾಯಿಗೆ ತಾನು ಅವಳನ್ನು ಮದುವೆಯಾಗುವನೆಂದೂ ತಿಳಿಸಿದ.

ಅತ್ತ, ಆತ ಪ್ರೀತಿಸಿದ ಹುಡುಗಿಯೂ ಅವಳ ಮನೆಯವರಿಗೆ ಈತನನ್ನು ಮದುವೆ ಆಗುತ್ತೇನೆಂದು ಹೇಳಿದ ಹಾಗೆ ಕಾಣಿಸುತ್ತದೆ. ಹೀಗೆ ಇಬ್ಬರ ಮನೆಯವರೂ ಒಪ್ಪಿದ ಕಾರಣ ಅವರ ಪ್ರೇಮ ಮತ್ತಷ್ಟು ಹೆಚ್ಚಿತು. ಪ್ರೇಮದಲ್ಲಿ ಮುಳುಗಿಯೋ ಏನೋ ಈ ರಾಜು ಫೇಲಾದ. ಆತ ಪ್ರೀತಿಸಿದ ಹುಡುಗಿ ಪಾಸಾದಳು ಫೇಲಾದಂದಿನಿಂದ ಈ ರಾಜು ಕಾಲೇಜನ್ನು ಬಿಟ್ಟು ಬಿಟ್ಟ. ಆತ ಪ್ರೀತಿಸಿದ ಹುಡುಗಿಯ ಮನೆಯಲ್ಲಿ ಹೋಗಿ ನಾನು ಈಕೆಯನ್ನು ಅಲ್ಲಿಯೇ ಇಟ್ಟು, ಅಂದರೆ ತಮ್ಮ ಮನೆಯಲ್ಲೇ ಕಾಲೇಜನ್ನು ಕಲಿಸುತ್ತೇನೆ ಎಂದು ಹೇಳಿದ. ಅವರೂ ಒಪ್ಪಿದರು. ಇವರ ಪ್ರೇಮ ಮತ್ತಷ್ಟು ಹೆಚ್ಚಿತು.

ರಾಜುವಿನ ಮನೆಗೆ ಆತ ಪ್ರೀತಿಸಿದ ಹುಡುಗಿ ಬರುತ್ತಿರುವಾಗಲಂತೂ ಆತನಿಗೆ ಖುಷಿ. ದಿವಸವೂ ಒಂದು ಕೊಟ್ಟೆ ಇಡುತ್ತಿದ್ದ. ಅವನ ಕಿಸೆಯಲ್ಲಿ ಈಗ ಎರಡೆರಡು ಕೊಟ್ಟೆಗಳು. ದಿವಸ-ರಾತ್ರಿಯೆಲ್ಲಾ ಲೋಡಾದ ಗಾಡಿಯು ಬೆಲೆನ್ಸ್ ಹಾಗೆ ನಡೆದು ಬರುತ್ತಿದ್ದ. ಹೆಂಡತಿ ಅಂದರೆ ಅವನು ಪ್ರೀತಿಸಿದ ಹುಡುಗಿ ಮತ್ತು ಅವನ ತಾಯಿಯ ಪದ ದಿವಸವೂ ಒಂದೇ ಆಗಿತ್ತು "ಕುಡಿಯಬೇಡ ಮಗ ಈಗಲಾದರೂ ಬಿಡು" ಎಂದು ತಾಯಿ ಹೇಳಿದರೆ, "ಕುಡಿಬೇಡ್ರಿ ನಿಮ್ಮ ಆರೋಗ್ಯ ಹಾಳಾತಿ" ಎಂದು ಹೆಂಡತಿ ಹೇಳುತ್ತಿದ್ದಳು. ಮದುವೆಯೂ ಆಗದೆ ಮಕ್ಕಳನ್ನು ಪಡೆದರೆ ಸಮಾಜ ಬಹಿಷ್ಕರಿಸುವುದೆಂಬ ಭಯದಿಂದ ಆಗಾಗ ಗರ್ಭಪಾತವೂ ಮಾಡಿಸುತ್ತಿದ್ದ.

ಎಷ್ಟೇ ನೆಂಟರ ಮನೆಯಾದರೂ 5-6, 10-15 ದಿವಸ ಉಳಿದರೆ ನೆಂಟರಿಗೂ ಬೇಸರವೆನಿಸುತ್ತದೆ. ಮನೆಯವರಿಗೂ ಬೇಸರವೆನಿಸುತ್ತದೆ. ಒಂದೆರಡು ದಿನ, ಊಟ ಮಾಡುವಾಗ ತೊಂಬಿಗೆಯಲ್ಲಿ ನೀರು ಕೊಟ್ಟರೆ 3ನೇ ದಿವಸ ನೀವೆ ತೆಗೆದುಕೊಳ್ಳಿ ಇನ್ನು ಕೆಲವಷ್ಟು ದಿವಸ ಉಳಿದರೆ ನೀವೇ ಬಾವಿಯಿಂದ ನೀರು ತೆಗೆದು ಬನ್ನಿ ಎಂದು ಹೇಳುವಂತೆ ಈ ರಾಜು ತನ್ನ ಹೆಂಡತಿಗೆ ಕಿರುಕುಳ ಕೊಡಲಾರಂಭಿಸಿದ. ಹೀಗೆ ಅವರ ಮನೆಯಲ್ಲಿ ಅವರಿಬ್ಬರಿಗೂ ಜಗಳವಾಗುತ್ತಿತ್ತು. ಒಂದು ದಿವಸ ಈ ರಾಜು ಪೇಟೆಗೆ ಹೋಗೋಣವೆಂದು ಸುಳ್ಳು ಹೇಳಿ ತನ್ನ ಹೆಂಡತಿಯನ್ನು ಬೆಟ್ಟದ ಬಳಿ ಕರೆತಂದ ಅಲ್ಲಿಯೇ ನಿಲ್ಲಿಸಿ ತಾನು ತಂದಿದ್ದ ಸೀಮೆ ಎಣ್ಣೆಯನ್ನು ಸುರಿದು ಬೆಂಕಿ ಹಚ್ಚಿದ.

ಬೆಂಕಿ ಧಗ ಧಗ ಉರಿಯಲಾರಂಭಿಸಿತು. ಆಕೆ ಕೂಗಲಾರಂಭಿಸಿತು. ರಾಜು ಅಲ್ಲಿಂದ ಮಾಯವಾಗಿದ್ದ. ಅಲ್ಲಿಯೆ ಇದ್ದ ಸುತ್ತ ಮುತ್ತಲಿನ ಜನ ಬಂದು ಆಕೆಯ ದೇಹಕ್ಕೆ ತಗುಲಿದ ಬೆಂಕಿಯನ್ನು ನಂದಿಸಿ ಆಸ್ಪತ್ರೆಗೆ ಸೇರಿಸಿದರು. ಈ ಘಟನೆಯಾದದ್ದು ರಾತ್ರಿ ಕಾಲದಲ್ಲಾಗಿತ್ತು. ಆದ್ದರಿಂದ ಈ ರಾಜುನನ್ನ ಹುಡುಕಲು ಆಗಲಿಲ್ಲ. ಆದರೂ ಪೋಲಿಸರಿಗೆ ದೂರುಕೊಡಲಾಯಿತು

ಮರುದಿವಸ ಬೆಳಿಗ್ಗೆ ಸೂರ್ಯೋದಯ ಆದಾಗ ಕಾಗೆಗಳು ಬಂದು ಮನೆಯ ಮುಂದೆ ಗದ್ದಲ ಎಬ್ಬಿಸುವಂತೆ ಈ ಪೋಲಿಸರು ಬಂದು ರಾಜುವಿನ ಮನೆಯಲ್ಲಿ ಗದ್ದಲ ಎಬ್ಬಿಸಿದರು. ರಾಜುವಿನ ಮನೆಯ ಒಳಗೆ ನುಗ್ಗಿ ಅವನಿಗೆ ಸಂಬಂಧಿಸಿದ ಕಾಗದಪತ್ರಗಳನ್ನು ತೆಗೆದುಕೊಂಡು ಹೋದರು. ಮನೆಯವರೆಲ್ಲರೂ ಕಂಗಾಲರಾದರು. ವಿಷಯ ಏನೆಂದು ಹೊತ್ತು, ಏರುತ್ತಾ ಹೋದ ಹಾಗೆ ಗೊತ್ತಾಯಿತು.

ಅತ್ತ ರಾಜುವಿನ ಹೆಂಡತಿ ತುಂಬಾ ಸೀರಿಯಸ ಆಗಿ ಆಸ್ಪತ್ರೆ ಸೇರಿದ್ದಳು. ಕೆಲ ದಿವಸದಲ್ಲಿ ಸುಟ್ಟ ಗಾಯ ಹೆಚ್ಚಾಗಿ ಮರಣ ಹೊಂದಿದಳು. ಅಂದಿನಿಂದ ಈ ಮಾಯವಾದ ರಾಜುವಿನ ಹುಡುಕಾಟದಲ್ಲಿ ಪೋಲಿಸರು ಬಿದ್ದರು. ಎಲ್ಲಿ ನೋಡಿದರು ಈ ರಾಜುವಿನ ಸುಳಿವಿಲ್ಲ. ಪೋಲಿಸರು ಊರು ಕಾಯುವುದು ಬಿಡಲಿಲ್ಲ. ಊರನ್ನ ಬಿಟ್ಟು ಬೇರೆ ಕಡೆ ಈ ಪೋಲಿಸರು ಹುಡುಕುತ್ತಿಲ್ಲವಾಗಿತ್ತು, ದಾರಿಯಲ್ಲಿ ಬಿದ್ದ, ಹಲಸಿನ ಮರದಲ್ಲಿ ಮಲಗಿಯೇ ಬೆಳಗು ಮಾಡಿಕೊಂಡು ಪೋಲಿಸರು ಹೋಗುತ್ತಿದ್ದರು. ಹಳ್ಳಿಯ ಜನಕ್ಕೆಲ್ಲಾ ಹೆದರಿಸುತ್ತಿದ್ದರು. ಸುಮಾರು ಐದಾರು ತಿಂಗಳುಗಳವರೆಗೂ ಇವನ ಸುಳಿವಿಲ್ಲ. ಪೋಲಿಸರು ಊರು ಕಾಯುವುದು ಬಿಡಲಿಲ್ಲ. ಪ್ರಾರಂಭದಲ್ಲಿ ಒಂದೆರಡು ಪೋಲಿಸರು ಬರುತ್ತಿದ್ದರು. ನಂತರದಲ್ಲಿ ಐದಾರು ಪೋಲಿಸರು ರಾಜು ಒಬ್ಬನನ್ನು ಹಿಡಿಯಲು ಬರುತ್ತಿದ್ದರು.

ಹೀಗೆ ಹುಡುಕುತ್ತಿದ್ದಾಗ ಒಂದು ದಿವಸ ಸಂತೆಯಲ್ಲಿ ಈ ರಾಜು ಬಂದ. ಆಗ ಯಾವುದೋ ಪೋಲಿಸರ ಕೈಗೆ ಸಿಕ್ಕು ಬಿದ್ದು ಸ್ಟೇಶನ್ ಸೇರಿದ. ಅಲ್ಲಿ ಪೋಲಿಸರ ಲತ್ತೆಯ ಪೆಟ್ಟಿಗೆ ಸಾಕುಸಾಕಾಗಿ ಹೋದ. ಜೈಲಿನಲ್ಲೂ ಹಾಕಿದರು. ಜೈಲಿನಲ್ಲಿ ಮೂರು ನಾಲ್ಕು ವರ್ಷ ಉಳಿದು ಬಿಳಿ ಅಕ್ಕಿಯ ಅನ್ನ ಊಟ ಮಾಡಿ ಈ ರಾಜು ಬಡಕಲಾಗಿದ್ದ ಅಂದಿನಿಂದ ಈ ರಾಜುವಿಗೆ 'ಸೀಮೆ ರಾಜು' ಎಂದೇ ಕರೆಯುತ್ತಿದ್ದರು.

— ಮಾಸ್ತಿ ಜೆ. ನಾಯ್ಕ
ಎರಡನೇಯ ಪಿ. ಯು. ಸಿ.

# ದೇವರ ಸೇವಕ

ಒಬ್ಬಾತ ಇನ್ನೊಬ್ಬರ ಹಣ್ಣಿನ ತೋಟದಿಂದ ಹಣ್ಣುಗಳನ್ನು ಕಿತ್ತು ತಿನ್ನುತ್ತಿದ್ದ. ತೋಟದ ಮಾಲಿಕ ಬಂದು ಕೇಳಿದ : "ಇಂಥ ಅನ್ಯಾಯದ ಕೆಲಸ ಏಕೆ ಮಾಡಿದೆ? ನಿನಗೆ ದೇವರ ಮೇಲೆ ಭಯವಿಲ್ಲವೆ?"

ಹಣ್ಣು ತಿಂದವ ಹೇಳಿದ : "ಭಯವೇಕೆ? ಮರವು ದೇವರದು, ನಾನು ದೇವರ ಸೇವಕ, ದೇವರ ಮರದ ಹಣ್ಣನ್ನು ತಿಂದರೆ ಏನಾಯಿತು?"

ಮಾಲಿಕ ಹೇಳಿದ : "ತಾಳು ನಿನ್ನ ಈ ಪ್ರಶ್ನೆಗೆ ಉತ್ತರ ಕೊಡುತ್ತೇನೆ." ಹೀಗೆಂದು ಆತನನ್ನು ಹಿಡಿದು ಮರಕ್ಕೆ ಕಟ್ಟಿ ಬಾರುಕೋಲಿನಿಂದ ಬಾರಿಸತೊಡಗಿದ.

ಹಣ್ಣು ತಿಂದವ : "ನನಗೆ ಹಗೆ ಏಟು ಕೊಡುತ್ತಿರುವೆಯಲ್ಲಾ. ನಿನಗೆ ದೇವರ ಭಯವಿಲ್ಲವೇ?"

ಮಾಲಿಕ ಹೇಳಿದ : "ಭಯ ಏಕೆ? ನೀನು ದೇವರ ಸೇವಕ. ಹಾಗೆಯೇ ಈ ಬಾರುಕೋಲೂ ದೇವರ ಸೃಷ್ಟಿ ತಾನೇ? ಇದರಲ್ಲಿ ತಪ್ಪೇನಿದೆ?"

# ಚಾಟಿ ಮರೆತ ಧೈರ್ಯಸ್ಥ

ಒಬ್ಬ ಧೈರ್ಯಸ್ಥ ಒಮ್ಮೆ ತನ್ನ ಕತ್ತೆಯ ಮೇಲೆ ಪ್ರಯಾಣ ಮಾಡುತ್ತಿದ್ದ. ಆಗ ಆ ಕಾಡಿನಲ್ಲಿದ್ದ ಒಂದು ಗವಿ ಅವನೆದುರಿಗೆ ತನ್ನ ಗುಪ್ತ ಬಾಗಿಲನ್ನು ತೆರೆದು ಬಿಟ್ಟಿತು ವ್ಯಕ್ತಿ ಕತ್ತೆಯಿಂದಿಳಿದು ಧೈರ್ಯವಾಗಿ ಗವಿಯೊಳಗೆ ಹೋದನು. ಹೀಗೆ ಒಳಗೆ ವಜ್ರವೈಡೂರ್ಯಗಳ ಭಂಡಾರವೇ ಇತ್ತು. ಆತ ಗವಿಯೊಳಗಿನಿಂದ ತನ್ನ ಕೈಲಾದಷ್ಟು ವಜ್ರ ವೈಡೂರ್ಯಗಳನ್ನು ಹೊತ್ತು ತಂದು ಕತ್ತೆಯ ಮೇಲೆ ಹೇರಿದ. ಹಾಗೇ ಮುಂದೆ ಪ್ರಯಾಣ ಮಾಡಲು ನಿಶ್ಚಯಿಸುತ್ತಿದ್ದಂತೆ ತನ್ನ ಚಾಟಿಯನ್ನು ಗವಿಯೊಳಗೇ ಬಿಟ್ಟು ಬಂದದ್ದು ನೆನಪಿಗಾಗಿ ವ್ಯಕ್ತಿ ಹಿಂದಿರುಗಿ ಗವಿಯೊಳಕ್ಕೆ ಓಡಿದ. ಆಗ ಆ ಮಾಯಾವಿ ಗವಿ ಮಾಯವಾಗುವ ಸಮಯ ಸಮೀಪಿಸಿತ್ತು. ಗವಿಯು ವ್ಯಕ್ತಿಯ ಸಮೇತ ಮಾಯವಾಗಿ ಬಿಟ್ಟಿತು!

ಕತ್ತೆಯೊಂದೇ ಊರಿಗೆ ಮರಳಿತ್ತು. ಊರಿನವರು ವ್ಯಕ್ತಿಗಾಗಿ ಹುಡುಕಾಡಿ ಕೊನೆಗೆ ಅವನು ಸಿಗದೇ ಆ ಸಂಪತ್ತನ್ನು ತಾವೇ ಹಂಚಿಕೊಂಡು ಶ್ರೀಮಂತರಾದರು.

— **ನವೀನ್ ಎಸ್. ನಾಯ್ಕ**
ಎಂಟು ಬಿ.

# ಕಿಲಾಡಿ ತಾತ

ಸೂರ್ಯ ಮುಳುಗುವ ಸಮಯ. ಹುಬ್ಬಳ್ಳಿ ಎಕ್ಸ್‌ಪ್ರೆಸ್ ಬಸ್ ವಿಜಾಪುರ ನಿಲ್ದಾಣದಲ್ಲಿ ಓಡಾಟ ಶುರುವಾಯಿತು. ಬಸ್ ನಿಂತಿತು. ಪ್ರಯಾಣಿಕರು ಸೀಟಿನ ಬೇಟೆಗಾಗಿ ಗಂಟು-ಮೂಟೆಗಳೊಂದಿಗೆ ಬಸ್ಸಿನ ಜೊತೆಗೆ ಓಡಿದರು. ಗದ್ದಲ-ಗೌಜಿಗಳ ನಡುವೆ ಆಕರ್ಷಕ ವ್ಯಕ್ತಿತ್ವದ ಗೌರವಾನ್ವಿತನಂತೆ ತೋರುವ ಓರ್ವ ವೃದ್ಧ ಬಸ್ಸನ್ನು ಹತ್ತಿದ. ಥಕ್ಕನೆ ನೋಡಿದರೆ 70 ವರ್ಷದವನಂತೆ ತೋರುತ್ತಿದ್ದ. ಆತ ನೇರವಾಗಿ ಕುಳಿತಿದ್ದರೂ ಆತನ ದೃಷ್ಟಿ, ಲಕ್ಷ್ಯ ಹಿಂದೆಯೇ ಇತ್ತು. ಅವನನ್ನು ನೋಡಿದರೆ ಕೊಂಚ ಗಲಿಬಿಲಿಗೊಂಡಂತೆ ಕಾಣುತ್ತಿದ್ದ. ಹಾಗೇ ಬಸ್ ಹೊರಟಿತು. ಕಂಡಕ್ಟರ್ ಟಿಕೇಟ್ ಕೊಡಲು ಪ್ರಾರಂಭಿಸಿದ. ಮುಂದಿನ ನಾಲ್ಕಾರು ಜನರಿಗೆ ಟಿಕೇಟ್ ಕೊಟ್ಟು ಮುದುಕನ ಹತ್ತಿರ ಬಂದು ಟಿಕೇಟ್ ಕೊಡಲು ಕೇಳಿದ, 'ನನಗೆ ಹುಬ್ಬಳ್ಳಿಗೆ ಹೋಗಬೇಕು ಟಿಕೇಟ ಹಿಂದೆ ಹೆಣ್ಣು ಮಕ್ಕಳು ತೆಗೆಯುತ್ತಾರೆ' ಎಂದು ಮುದುಕ ಹೇಳಿದ. ಕಂಡಕ್ಟರ ಯಾರಿಗೆ ಟಿಕೆಟ್ ಎನ್ನುತ್ತಾ ಹಿಂಬದಿಗೆ ಹೋದ. ಸ್ವಲ್ಪ ಸಮಯದ ನಂತರ "ಎನ್ರೀ ಯಜಮಾನ್ರೇ ಯಾರು ನಿಮ್ಮ ಟಿಕೇಟ ತೆಗೆಯುವವರು?" ಅಂತ ಕೂಗಿ ಹೇಳಿದ.

ಹಿಂದೆಯೇ ದೃಷ್ಟಿ ನೆಟ್ಟು ಕುಳಿತಿದ್ದ ಮುದುಕ "ಅಲ್ಲೇ ಇದ್ದಾರ ನೋಡಿ, ಏಯ್ ಯಾಕೆ ನನಗೊಂದು ಹುಬ್ಬಳ್ಳಿಗೆ ಟಿಕೇಟ್ ತೆಗೆಸುವುದಿಲ್ಲವೇನೇ? "ಓರ್ವ 20ರ ಸುಂದರಿಯತ್ತ ಕೈ ಮಾಡುತ್ತ ದಬಾಯಿಸಿದ ಮತ್ತಾರಿಗೋ ಹೇಳುತ್ತಿರಬಹುದೆಂದು ಭಾವಿಸಿದ ಆ ತರುಣಿ ಅಕ್ಕ-ಪಕ್ಕ ನೋಡಿ ಸರಿಯಾಗಿ ಕುಳಿತುಕೊಂಡಳು. "ಏ ನಿನಗೆ ಹೇಳ್ತಾ ಇದ್ದೀನಿ, ಕಿವಿ ಕೇಳಿಸೊದಿಲ್ಲವೆ? ಯಾಕೆ ಟಿಕೇಟ್ ತೆಗೆಯಲಿಲ್ಲ" ಎಂದನು. "ಯಾರಿಗ್ರೀ? ನನಗಾ ಹೇಳಿದ್ದು, ನಾ ಯಾಕೆ ಟಿಕೇಟ್ ತೆಗೆಯಲಿ? ಎಂದು ಪ್ರಶ್ನಿಸಿದಳು ತರುಣಿ". "ಯೇ ಇವಳ, ನೀನು ತೆಗೆಸದಿದ್ರೆ ಮತ್ತೆ ಯಾರು ನನ್ನ ಟಿಕೇಟ್ ತೆಗೆಸ್ತಾರೆ? ಎನ್ನುವ ಅವನ ಕಂಠದಲ್ಲಿ ಅಧಿಕಾರವಾಣಿಯಿತ್ತು. ತರುಣಿ ಗಲಿಬಿಲಿಗೊಂಡಳು. "ಯಾಕೆ ನೀವು ಹೀಗೆ ಮಾತನಾಡುತ್ತೀರಿ? ನೀವು ಯಾಕೆ ನನ್ನ ಹತ್ತಿರ ಟಿಕೇಟ ತೆಗೆಯಲು ಹೇಳ್ತಾ ಇದ್ದೀರಿ" ಎಂದು ಸಿಟ್ಟಿನಿಂದಲೇ ಅವಳು ಹೇಳಿದಳು. ಮೇಲಿನಂತ ಮುದುಕ ಅವಳ ಹತ್ತಿರ ಜಗಳವಾಡಲು ಶುರು ಮಾಡಿದ.

ಪ್ರಯಾಣಿಕರೆಲ್ಲ ಕುತೂಹಲದಿಂದ ಇವರತ್ತ ನೋಡುತ್ತಿದ್ದರು. ಕಂಡಕ್ಟರನೂ ಸಹನೆಯಿಂದಲೇ ಇವರ ವಾಗ್ವಾದವನ್ನೇ ದೃಷ್ಟಿಸತೊಡಗಿದ್ದ. ತರುಣಿಯು ತನ್ನಲ್ಲೇ ವಟಗುಡಹತ್ತಿದಳು. 'ನನಗೆ...ನಿನಗೆ ಏನು ಸಂಬಂಧಾ ಅಂತ ಹೇಳ್ತಾ

ಇದ್ದೀಯಲ್ಲಾ ? ಯಾಕೆ ? ನೀನು ನನ್ನ ಹೆಂಡ್ತಿ ಅಲ್ವಾ ? ಈ ಮಾತು ಕೇಳಿ ಬಸ್ಸಿಗೆ ಬಸ್ಸೇ ಹೌಹಾರಿತು. ಬೇರೆ ಕಡೆ ನೋಡುತ್ತಿದ್ದ ಜನರೂ ಇವರತ್ತ ನೋಡಲಾರಂಭಿಸಿದರು. ಅವರ ಹಿಂದಿನಿಂದ ಅನೇಕ ಧ್ವನಿಗಳು ಬರಲಾರಂಭಿಸಿದವು. ಒಬ್ಬ ವ್ಯಕ್ತಿ 'ಇವನು 70 ವಯಸ್ಸಿನ ಮುದುಕ. ಅವನಿಗೆ ಅವಳು ಹೆಂಡತಿಯಾಗ್ತಾಳಾ ? ಎಂದು ತನ್ನ ದೋಸ್ತನಿಗೆ ಹೇಳಿದ. ಈತ ಕಂಡ-ಕಂಡ ಹೆಣ್ಣುಮಕ್ಕಳನ್ನು ಹೆಂಡ್ತಿ ಹೇಳುತ್ತಿದ್ದಾನಲ್ಲಾ ? ಏನ್ರೀ ನಿಮಗೆ ನಾಚಿಕೆ ಬರುವುದಿಲ್ಲವೇ ? ಮುದುಕರಾದರೂ ನಿಮಗೆ ಬುದ್ಧಿ ಬರಲಿಲ್ಲೇನ್ರಿ ? ಎನ್ನುವ ಅನೇಕ ಮಾತುಗಳು ಅನೇಕ ಸೀಟಿನಿಂದ ಕೇಳಲಾರಂಭಿಸಿದವು. ಇಂತಹ ಮಾತುಗಳನ್ನು ಕೇಳುತ್ತಿದ್ದ ಚೆಲುವೆಯ ಕಣ್ಣಲ್ಲಿ ನೀರು ಬರಲಾರಂಭಿಸಿದವು. ಇವನು ನನಗೆ ಮೋಸ ಮಾಡುತ್ತಿದ್ದಾನೆಂದು ತನ್ನ ಪಕ್ಕದಲ್ಲಿದ್ದವರಿಗೆ ಹೇಳುತ್ತಿದ್ದಳು.

ಮುದುಕ ಸುಳ್ಳು ಹೇಳುತ್ತಿರುವನೆಂದೇ ಹೆಚ್ಚಿನವರ ಅಭಿಮತ. ಅಷ್ಟು ಸುಂದರ ಆಧುನಿಕ ತರುಣಿಯನ್ನು ಅವನ ಮಡದಿಯೆಂದು ಯಾರೂ ಒಪ್ಪಲಿಲ್ಲ. ಹಳ್ಳಿಯ ಹೆಂಗಸರು ಇದನ್ನು ನೋಡಿ ತಮ್ಮಷ್ಟಕ್ಕೇ ತಾವೇ ನಗುತ್ತಿದ್ದರು. ಕೆಲವರಿಗೆ ಹಾಸ್ಯ ಪ್ರಧಾನ ನಾಟಕದಂತೆ ತೋರುತ್ತಿತ್ತು. ತರುಣಿಯೂ ವಾದಿಸುತ್ತಿದ್ದಳು, ಅಳುತ್ತಿದ್ದಳು, ಕಂಡಕ್ಟರ ಅಸಹನೆಯಿಂದ ನುಡಿದ. ನೋಡ್ರಿ, "ನೀವು ಬೇಗ ಟಿಕೇಟ್ ತೆಗೆಯಿರಿ. ಊರು ಮುಟ್ಟಿದಾಗ ನಿಮ್ಮ ಜಗಳ ಬಗೆಹರಿಸೋಣ" ಎಂದ. "ಹೇಳ್ತಾನೆ ಇದ್ದೇನೆ ಸಾಹೇಬ್ರೇ. ನನ್ನ ಹತ್ತಿರ ಒಂದು ಪೈಸೆಯೂ ಇಲ್ಲ. ಎಲ್ಲವೂ ಅವಳ ಹತ್ತಿರವೇ ಇದೆ. ನನ್ನ ಪಾಕೆಟ್ ಸಹ ಅವಳ ಹತ್ತಿರ ಇದೆ ಎಂದ." ಅವಳ ಪಕ್ಕದಲ್ಲಿ ಕುಳಿತಿದ್ದ ಹೆಂಗಸೊಬ್ಬಳು ತಂಗಿ ನಿನ್ನ ವ್ಯಾನಿಟಿ ಬ್ಯಾಗ ಕೊಡಮ್ಮ. ಹಣ ಎಲ್ಲಾದ್ರೂ ಇದ್ರೆ ನೋಡ್ತೀನಿ" ಎನ್ನುತ್ತಾ ವ್ಯಾನಿಟಿ ಬ್ಯಾಗ ತೆಗೆಯಲು ಹೋದಾಗ, ತರುಣಿಯ ಮುಖ ಹಣೆಯ ಮೇಲೆ ಬೆವರ ಹನಿಗಳು ಕಾಣಿಸಿಕೊಂಡಿತು. ತರುಣಿ ಗಾಬರಿಗೊಂಡಳು. ವ್ಯಾನಿಟಿ ಬ್ಯಾಗ ತೆಗೆದು ನೋಡಿದರೆ ಅದರೊಳಗೆ ದಪ್ಪನೆಯ ಚರ್ಮದ ಪರ್ಸ ದೊರಕಿತು. ಅದರಲ್ಲಿ ಮುದುಕನ ಫೋಟೋ ಹಾಗೂ ನೂರರ-ಐವತ್ತರ ನೋಟುಗಳಿದ್ದವು. ಆಗ ಆ ಹೆಂಗಸು ಅವಳನ್ನು ತರಾಟೆಗೆ ತೆಗೆದುಕೊಂಡಳು. ಈಗ ಮತ್ತೆ ಬಸ್ಸಿನಲ್ಲಿ ಅನೇಕ ಪ್ರತಿಕ್ರಿಯೆಗಳು ಕೇಳಿಬಂದವು. ಯಾರೋ ಕೇಳಿದ ಪ್ರಶ್ನೆಗೆ ಮುದುಕ ಇವಳು ನನ್ನ ಮೂರನೇ ಹೆಂಡ್ತಿ. ಎಂದಾಗ ಅವನು (ಇನ್ನೊಬ್ಬ ವ್ಯಕ್ತಿ) ಛೆ, ಛೆ ಹಾಗಾದರೆ ಮೊದಲಿನ ಇಬ್ಬರನ್ನೂ ಕೈಲಾಸಕ್ಕೆ ಕಳಿಸಿದ್ದಿರೇನ್ರೀ" ಎಂದಾಗ ಅವರು ಹೆಡ್‌ಕ್ವಾರ್ಟರನಲ್ಲಿ ಇದ್ದಾರೆ" ಮುದುಕ ಉತ್ತರಿಸಿದ. ಅಂತೂ ಆ ಮುದುಕ ತರುಣಿಯ ಗಂಡ ಎನ್ನುವುದರಲ್ಲಿ ಯಾವ ಸಂಶಯ ಉಳಿಯಲಿಲ್ಲ. ಹೀಗೆ ಬಸ್ ಎಲ್ಲಿಯೂ ನಿಲ್ಲದೇ ಜಮಖಂಡಿ ನಗರ ಪ್ರವೇಶಿಸಿತು. ಅನೇಕ ಜನರು ಬಸ್‌ಸ್ಟ್ಯಾಂಡಿನಲ್ಲೇ ಇಳಿದರು. ಅಲ್ಲಿ ವಿಶ್ರಾಂತಿಗಾಗಿ 5 ನಿಮಿಷ ಬಸ್‌ನ್ನು ನಿಲ್ಲಿಸಲಾಯಿತು.

ವಿಶ್ರಾಂತಿಯ ನಂತರ ಎಲ್ಲರೂ ಬಸ್‌ನ್ನೇರತೊಡಗಿದರು. ಎಲ್ಲಿಂದೋ ಒಂದು ಧ್ವನಿ ಬಂತು. ಮುದುಕನ ಹೆಂಡತಿ ಇನ್ನೂ ಬರಲಿಲ್ಲ. ಬಸ್ ಬಿಡುವ ವೇಳೆ ಯಾಯಿತು ಎಂದು ಚುಡಾಯಿಸಿದರು. ಆಕೆ ಬರುವುದಿಲ್ಲ. ನೀವು ಸೀಟಿ ಊದಿರಿ ಎಂದು ಶಾಂತ ರೀತಿಯಲ್ಲಿ ನುಡಿದ ಮುದುಕ. ಏನ್ರೀ ತಲೆಕೆಟ್ಟಿದೆಯೇನ್ರೀ, ನೀವ್ಯಾಕೆ ಹೀಗೆ ಮಾತಾಡ್ಲಾಕ ಹತ್ತೀರಿ? ಅಸಹನೆಯಿಂದ ಕೇಳಿದ ಪ್ರಯಾಣಿಕರೆಲ್ಲಾ ವಿಚಿತ್ರ ರೀತಿಯಿಂದ ಮುದುಕನನ್ನು ದಿಟ್ಟಿಸ ತೊಡಗಿದರು. ಅವರ ಪಕ್ಕದಲ್ಲಿದ್ದವನು "ಏನ್ರೀ, ನಿಮ್ಮ ಕಥೆ ಏನಾಯ್ತು ಹೇಳ್ರಿ" ಎಂದಾಗ ಇಷ್ಟೊತ್ತು ಸುಮ್ಮನೆ ಕುಳಿತಿದ್ದ ಮುದುಕ ಕಥೆ ಹೇಳಲು ಆರಂಭಿಸಿದ. "ನಿಜವಾಗಿಯೂ ಆಕೆ ನನ್ನ ಹೆಂಡತಿ ಅಲ್ಲ" ಆಗ ಇಡೀ ಬಸ್ಸೇ ಮತ್ತೊಮ್ಮೆ ಅವಾಕ್ಕಾಯಿತು.

"ಏನ್ರಿ ಆಗ ನೋಡಿದ್ರೆ ನಿಮ್ಮ ಹೆಂಡ್ತಿ ಹೇಳಿದ್ರಿ. ಈಗ ನೋಡಿದ್ರೆ ಪ್ಲೇಟ ತಿರವಿಹಾಕಿದಿರಲ್ಲಿರಿ" ಎಂದು ಒಬ್ಬ ವ್ಯಕ್ತಿ ಮುದುಕನಿಗೆ ಹೇಳಿದ. ನಾನು ಅವಳನ್ನು ಮದುವೆ ಮಾಡಿಕೊಳ್ಳಲಿಕ್ಕೆ ನನ್ನ ವಯಸ್ಸೇನು? ಅವಳ ವಯಸ್ಸೇನು? ಆಕೆ ಯಾರು? ಆಕೆಯ ಹೆಸರೇನು? ಏನೂ ಗೊತ್ತಿಲ್ಲ. ಆದರೆ ಆಕೆಯ ಕೆಲಸ ಮಾತ್ರ ಗೊತ್ತು" ಆ ಹುಡುಗಿಯ ಕೆಲಸ ಪಿಕ್‌ಪಾಕೆಟ್ ಮಾಡುವುದು. ಗೌರವಾನ್ವಿತ ಹೆಂಗಸ ಳಂತೆ ಡ್ರೆಸ್ ಹಾಕಿಕೊಂಡು ಬರುತ್ತಾಳೆ. ಯಾರಿಗೂ ಸಂಶಯ ಬರದಂತೆ ಕಿಸೆ ಕತ್ತರಿಸು ತ್ತಾಳೆ" ಪ್ರಯಾಣಿಕರೆಲ್ಲಾ ಮಂತ್ರಮುಗ್ಧರಾಗಿ ಅವನ ಮಾತನ್ನು ಕೇಳುತ್ತಿದ್ದರು. ನಾನು ಬಸ್ ಹತ್ತುವಾಗ ನನ್ನ ಹತ್ತಿರ ನಿಂತುಕೊಂಡಿದ್ದಳು. ಕಣ್ಣು ಮುಚ್ಚಿ ತೆರೆಯುವಾಗ ನನ್ನ ಪಾಕೆಟ್ ಹಾರಿಸಿ ತಾನು ಇಟ್ಟುಕೊಂಡಳು. ಇದು ನನಗೆ ತಿಳಿ ದಿತ್ತು. ಆಕೆ ಅಲ್ಲೇ ಫೇತ ಆದದ್ದು. ಆಗಲೇ ಅವಳಿಂದ ತೆಗೆದುಕೊಳ್ಳಲು ಬಯಸಿದೆ. ಆದರೆ ನಾನು ಪೋಲಿಸ ಇಲಾಖಾದಾಗ ಎಸ್. ಪಿ. ಇದ್ದೆ. ಪೆನಶನ ಆಗಿ 15 ವರ್ಷ ಆಯಿತು. ಎಲ್ಲರಿಗೂ ತಿಳಿಯಲು ಈ ನಾಟಕವಾಡಿದೆ ಎಂದಾಗ ಪ್ರಯಾಣಿಕರೆಲ್ಲ ಆಶ್ಚರ್ಯಚಕಿತರಾದರು. ಮುದುಕನ ಬಗ್ಗೆ ಎಲ್ಲಿಲ್ಲದ ಗೌರವ ಭಾವನೆ ಮೂಡತೊಡ ಗಿತು. ಮುದುಕ ಬಾನಿನೆತ್ತರ ಬೆಳೆದುನಿಂತ. ಬಸ್ಸು ಕತ್ತಲೆಯನ್ನು ಸೀಳಿಕೊಂಡು ಮುಂದೆ ಧಾವಿಸುತ್ತಿತ್ತು.

— **ಸುನೀತಾ ಎಸ್. ಪಟಗಾರ**

ದ್ವಿತೀಯ ಪಿ. ಯು. ಸಿ.

# ಹಾಸ್ಯ

1) ಮಾಲಿಂಗ �& ಪುಟ್ಲಿಂಗ ಇಬ್ಬರೂ ಚಡ್ಡಿದೋಸ್ತರು. ಇವರ ದೋಸ್ತಿ ಅಷ್ಟೊಂದು ಗಾಢವಾಗಿ ಬೆಳೆಯಲು ಕಾರಣ ಇಬ್ಬರಿಗೂ ಜನ್ಮದತ್ತವಾಗಿ ಬಂದಿದ್ದ ಕಿವುಡುತನ.

ಅಂದು ಭಾನುವಾರ ಬೆಳಿಗ್ಗೆ 8–30ಕ್ಕೆ ಮಾಲಿಂಗ ಬೀದಿ ಕೊನೆಯ ತಿರುವಿನಲ್ಲಿ ಕಾಲೆಳೆದುಕೊಂಡು ಬರುತ್ತಿದ್ದ. ಆತ ಹೇರ್‌ಕಟಿಂಗ್ ಮಾಡಿಸಿಕೊಂಡು ಬರುತ್ತಿದ್ದಾನೆಂದು ಆತನ ತಲೆಯೇ ಹೇಳುತ್ತಿತ್ತು.

"ಏನ್ಲಾ ಮಾಲಿಂಗ...ಕಟಿಂಗ್‌ಗೆ ಉಗಿದ್ದೇನ್ಲಾ ?" ಅವನನ್ನು ಹುಡುಕಿಕೊಂಡು ಬಂದ ಪುಟ್ಲಿಂಗ ಪರಮಾಶ್ಚರ್ಯದಿಂದ ಕೇಳಿದ.

"ಇಲ್‌ಕಣ್ಲಾ......ಕಟ್ಟಿಂಗ್‌ಗೆ ಓಗಿದ್ದೆ !"

ಮಾಲಿಂಗ ಪ್ರಾಮಾಣಿಕವಾಗಿ ಉತ್ತರಿಸಿದ. ಪುಟ್ಲಿಂಗ ಕಣ್ಣರಳಿಸಿ ಹೇಳಿದ. "ಔದಾ...ನಾನೆಲ್ಲೋ ನೀನ್ ಕಟಿಂಗ್‌ಗೆ ಐಗಿದ್ಲೇನೋ ಅಂದ್ಕೊಂಡೆ !"

2) ಪ್ರಶ್ನೆ : "ನಿನ್ನೆ ಶಾಸ್ತ್ರಿಭವನದಲ್ಲಿ ಎಸ್. ಶಂಭು ಭಟ್ಟರ ಕೊಳಲು ಕೇಳಿದ್ಯಾ?"
ಉತ್ತರ : "ಕೇಳಿದೆ. ಆದರೆ ಕೊಡಲ್ಲ ಅಂದ್ರು.

3) ಅಂದು "ಮಾರ್ಚ 31." ನಮ್ಮ ಲಾಲೂಜಿ ಮಿತ್ರನ ಸಂಗಡ ದಿಲ್ಲಿಯ ಪಂಚ ತಾರಾ ಹೊಟೇಲ್‌ನಲ್ಲಿ ತಂಗಿದ್ದರು. ಸ್ನೇಹಿತನ ಕೋಣೆ ಇದ್ದುದು 7 ನೇ ಮಹಡಿಯಲ್ಲಿ. ಲಾಲೂ ನೆಲಮಹಡಿಯಲ್ಲಿದ್ದರು. ಸುಮಾರು ರಾತ್ರಿ 12 ಗಂಟೆ ಸಮಯ. ಲಾಲೂಜಿ ರೂಮ್‌ನ ಫೋನ್ ಟ್ರಿಣ್‌ಗುಟ್ಟಿತು. ಆ ಕಡೆಯಿಂದ ಮಿತ್ರನ ಕರೆ "ಲಾಲೂಜಿ......ಕೂಡಲೇ ಬನ್ನಿ ತುಂಬಾ ಅರ್ಜೆಂಟ್"......ಫೋನ್ ಕಟ್ ಆಯಿತು. ಮಿತ್ರನ ಧ್ವನಿಯಲ್ಲಿದ್ದ ಆತಂಕ ಗ್ರಹಿಸಿದ ಲಾಲೂ ಕೂಡಲೇ ಉಟ್ಟ ಬಟ್ಟೆಯಲ್ಲೇ ನಡೆದರು. ಕರೆಂಟ್ ಬೇರೆ ಆದೇ ವೇಳೆ ಕೈಕೊಡಬೇಕೆ ? ಲಾಲೂ ತಮ್ಮ ಅದೃಷ್ಟವನ್ನು ಹಳಿಯುತ್ತಾ ಮೆಟ್ಟಿಲ ಮೂಲಕವೇ ಏದುಸಿರು ಬಿಡುತ್ತಾ ಅಂತೂ ಏಳನೇ ಮಹಡಿ ತಲುಪಿದರೂ ಅದೂ ಅರ್ಧ ಗಂಟೆ ನಂತರ. ಆದರೆ ಮಿತ್ರನ ರೂಮಿನ ಬಾಗಿಲಿನ ಮೇಲೆ ಚೀಟಿಯೊಂದು ಅಂಟಿಕೊಂಡಿತ್ತು. "ಮಿತ್ರಾ ಮೋಸ ಹೋದೆಯಾ... ಇವತ್ತು ಏಪ್ರಿಲ್ 1...ಏಪ್ರಿಲ್ ಫೂಲ್ ಆದೆಯೊ?" ಎಂದು ಬರೆದಿತ್ತು. ಲಾಲೂ ಏನೂ ಕಡಿಮೆ ಆಸಾಮಿಯಲ್ಲ ಒಂದು ಚೀಟಿ ಬರೆದು ಅಂಟಿಸಿ ಕೆಳಗಿಳಿದು ಬಂದು ಬಿಟ್ಟರು. ಆ ಚೀಟಿಯಲ್ಲಿ ಹೀಗೆ ಬರೆದಿತ್ತು. "ಮೂರ್ಖ, ನನ್ನನ್ನೇನು ಪೆದ್ದನೆಂದು ತಿಳಿದೆಯಾ ?...ನಾನಿಲ್ಲಿಗೆ ಬರಲೇ ಇಲ್ಲ !!!

— ಸುಬ್ರಹ್ಮಣ್ಯ ಜಿ. ಭಟ್ಟ, 9 ಬಿ.

## ಭಾರತ ಮಾತೆಯ ಹಿರಿಮೆಯ ಹೊಗಳಿರಿ

ಭಾರತ ಮಾತೆಯ ಹಿರಿಮೆ ಹೊಗಳಿರಿ ।
ಭಾರತ ಮಾತೆಯ ಮೊಮ್ಮಕ್ಕಳೆ ।
ಭಾರತವೆಂಬುದು ಸ್ವತಂತ್ರವಾಗಿದೆ ।
ಭಾರತ ದೇಶದ ಹಕ್ಕಿಗಳೆ ॥

ಧವಳ ಶಿಖರದಲಿ ಧರ್ಮವು ನಲಿದಿದೆ ।
ಧರ್ಮಸ್ಥಳವದು ಕೂಗುತಿದೆ ।
ಧರ್ಮದ ಬೆಳಕಿಗೆ ಜ್ಞಾನಿಯ ದಿವಿಗೆಯು ।
ಧರ್ಮದ ಘೋಷವು ಕೇಳುತಿದೆ ॥

ವಿಶ್ವದ ಶಾಂತಿಗೆ ಭಾರತ ಕಾರಣ ।
ವಿಶ್ವಕೆ ಮುಡಿಸಿದೆ ತೋರಣವ ।
ವಿಶ್ವ ವಿನೂತನ ಭಾರತ ಧನ್ಯ ।
ವಿಶ್ವದ ಎದುರು ಭಾರತ ಮಾನ್ಯ ॥

ದಿಗಂತ ತಟದಲಿ ಭಾರತ ವಿಜ್ಞಾನ ।
ದಿಗಂತ ಸೇರಿದೆ ವೈಮನವ ।
ದಿಗಂತವೆಂಬುದು ವಿಜ್ಞಾನ ಬೆಳಕಿನ ।
ದಿಗಂತ ಜ್ಞಾನವೇ ಧ್ಯಾನವು ॥

– ಮೂಡ್ಗೇರಿ ಡಿ. ಎನ್. ನಾಯಕ

## ಅರಿವು

ಬೆಲೆಗಳು ಏರುತಿರೆ ದಿನದಿಂದ ದಿನಕೆ ।
ಇದರ ಅರಿವಿಲ್ಲ ಮಂತ್ರಿ ಆಡಳಿತಕೆ ।
ಬೆಳೆಸುತಿಹರು ತಮ್ಮ ಬಹುದೊಡ್ಡ ಹೊಟ್ಟೆ ।
ಕೊನೆಗೊಮ್ಮೆ ಉಡಲು ಇಲ್ಲಾ ಬಡವರಿಗೆ ಬಟ್ಟೆ ॥

– ಬೀಬಿ ನಜೀನ ಜೆ. ಗನಿ
I P. U. C.

## ಜ್ಞಾನವಂತರೆ (ಸ್ವಾಗತ-ಗೀತೆ)

ಜ್ಞಾನವಂತರೆ ಕಲೆಯದಾತರೆ ।
ಕೋರುವೆವು ಸ್ವಾಗತವನು ।
ಶಾಂತಿ ನೆಮ್ಮದಿ ಜ್ಞಾನ ಮೂಡಲಿ ।
ಹರಸಿ ಬೆಳೆಸಿರಿ ನಮ್ಮನು ॥

ನೀವು ನಮ್ಮ ಭಾಗ್ಯ ದೇವತೆ ।
ಭಕ್ತಿ ಮೂಡಿದೆ ಆದರ ।
ದೈವ ಕಳುಹಿದ ದೇವ ದೂತರೊ।
ಜ್ಞಾನ ತುಂಬಿದ ಸಾಗರ ॥

ನಿಮ್ಮ ನುಡಿಗಳು ನಮ್ಮ ಬದುಕಿನ ।
ಸತ್ಯ ಸಾಂತ್ವನ ಔತಣ ।
ನಮ್ಮ ಆಸೆಯಂತೆ ಬರಲಿ ।
ಭೀಷ್ಮ-ದ್ರೋಣರ ಬಾಣ ॥

ಮನಸು ಬಿಚ್ಚಲಿ ಹೃದಯ ಚುಚ್ಚಲಿ ।
ದೋಷ ಪಡೆದಿಹ ದೇಹಕೆ ।
ಸಹಬಾಳ್ವೆಯು ಬೆಳೆದು ನಿಲ್ಲಲಿ ।
ಕೈಗೆ ಸಿಗದಾಕಾಶಕೆಽಽ ॥

## (ಅ) ಜ್ಞಾನಿಗಳು

ಅರೆ... !
(ಅ) ಜ್ಞಾನ... ಪಂಡಿತರು
ನ್ಯಾಯಕ್ಕೆ ಕುಳಿತು
ನ್ಯಾ (ನಾ) ಯಿಗಳು
ಎಂದೆನಿಸಿ
ಕೊಂಡವರು.

– ಮೂಡ್ಗೇರಿ ಡಿ. ಎನ್. ನಾಯಕ

## ಅಕ್ಷರ ಬಸ್ಸು

### ( ಸಾಕ್ಷರ ಗೀತೆ )

ಊರ್ ಊರಿಗೆಲ್ಲಾ ಭಾರಿ ಸುದ್ದಿ ಬಂದೈತ್ರಪ್ಪಾ ।
ಮಲಗಿರೊ ಜನರೆಲ್ಲಾ ಏಳ್ರಪ್ಪಾ ।
ಅಕ್ಷರ ಅನ್ನೋ ಬಸ್ಸು ನಿಮ್ಮೂರಿಗ್ ಬರೋದ್ರೊಳ್ಗ ।
ನಿಮ್ಮ ಮಕ್ಳ ನಿದ್ದೆಯಿಂದ ಎಬ್ಸ್ರಪ್ಪಾ ॥

ಭಾರತ ದೇಶಕ್ಕ ಸ್ವಾತಂತ್ರ್ಯ ಬಂದಿದ್ದು ।
ಬಹಾಳ ವರ್ಷಾತ್ರಿ ಕೇಳ್ರಪ್ಪಾ ।
ಅಪ್ಪ-ಅಮ್ಮ ಕಲ್ತಿಲ್ಲಂತ ನಾವಾದ್ರೂ
ಕಲಿಯೋಣಂತ ।
ದೊಡ್ಡ ಮನ್ಸ ಮಾಡಿ ನೀವು ಬರ್ರಪ್ಪಾ ॥

ಕಲಿತಂತ ಅಣ್ಣೋರ್ಗೆ ಕೈ ಮುಗ್ದು ಕೇಳ್ಕೊಳ್ಳಿ ।
ತನಗೊಂದಕ್ಷರ ಕೈ ಹಿಡ್ದು ಕಲಿಸಿರಂತ ।
ದೇಶದಾಗ ನಡೆಯೋ ಸುದ್ದಿ ಪೇಪರದಲ್ಲಿ ಬರೋವಾಗ ।
ನಾನೂ ಓದಿ ಬರುವೆನಂತ ಹೇಳ್ರಪ್ಪಾ ॥

ಕಲಿತಂತ ಮಹನೀಯರು ಬೇಧ-ಭಾವ ಮಾಡದೇನೆ ।
ಒಳ್ಳೆ ಧರ್ಮ ಕ್ಷೇತ್ರಕ್ಕೆ ಕೈಮುಗಿಯಿರಿ ।
ಬಡವ್ರಾದ್ರೂ ಪರವಾಗಿಲ್ಲ ಸಿರಿತನ ಸ್ಥಿರವಲ್ಲ ।
ನಿಮ್ಮಲ್ಲಿದ್ದ ವಿದ್ಯೆಯನ್ನ ಧಾರೆಯೆರೆಯಿರಿ ।
ಮನೆ-ಮನೆ ಜನರೆಲ್ಲ ಕಲಿಯಬೇಕರಿ ।
ಅಕ್ಷರ ಕಲಿಯಬೇಕರಿ ॥

– ಮೂಡ್ಗೇರಿ ಡಿ. ಎನ್. ನಾಯಕ

## ರಾಜಕಾರಣ

ರಾಜಕಾರಣವೆಂಬುದು ಬಹುದೊಡ್ಡ ಯಜ್ಞ ।
ಆಗಿಹುದು ಸರಕಾರ ಬರೀ ಸ್ವಾಹಾದಲೇ ಮಗ್ನ ॥
ಕೊನೆಗೊಮ್ಮೆ ಅದರ ಆಶೆಯು ಭಗ್ನ ।
ಇದನು ಅರಿತವನೇ ನಿಜವಾದ ತಜ್ಞ ॥

– ಬೀಬಿ ನಜೀನ ಚಂದಾವರ

## ನೀತಿ

ರಾಜಕೀಯವು ಒಂದು ಸ್ಪರ್ಧೆಯ ಆಟ ।
ಕಲಿಸುವದು ಇದು ಒಂದು ನೀತಿಯ ಪಾಠ ॥
ಒಬ್ಬ ಗೆಲ್ಲಲು ಇನ್ನೊಬ್ಬ ಸೋಲಲೇ ಬೇಕು ।
ಸತ್ಯದ ಮಾತಿದನು ಅರಿತಿರಲೇ ಬೇಕು ॥

## ಪ್ರಜಾಪ್ರಭುತ್ವ

ಪ್ರಜಾಪ್ರಭುತ್ವದಲ್ಲಿಹುದು ಬಹುದೊಡ್ಡ ತತ್ವ ।
ಸರ್ಕಾರಕೆ ಅರಿವಿಲ್ಲ ಇದರ ಸತ್ಯ ॥
ಇದ್ದರೆ ಮಾತ್ರ ಜನರ ಪ್ರೀತಿ ಪಾತ್ರ ।
ಬಹುಮತ ದೊರೆಯುವುದು ಆಗಮಾತ್ರ ॥

## ಪ್ರೀತಿ

ತಿಳಿದಿರಲು ಬೇಕು ಸರಿಯಾಗಿ ಆಳುವ ನೀತಿ ।
ಆಗ ಗಳಿಸುವಿ ನೀನು ಪ್ರಜಾ ಪ್ರೀತಿ ॥
ಇದ ಬಿಟ್ಟರೆ ನೀನು ಆಗುವಿ ಬರಿ ಕೋತಿ ।
ತರದಿರು ನೀನು ರಾಷ್ಟ್ರಕೆ ಅಂತಃ ಗತಿ ॥

## ಗದ್ದುಗೆಯ ಹುಚ್ಚು

ಬಹುಬೇಗ ಬಿಡದು ಗದ್ದುಗೆಯ ಹುಚ್ಚು ।
ಒಮ್ಮೆ ಸೋತರೆ ಮಾತ್ರ ಆಗುವುದು ಪೆಚ್ಚು ॥
ಗೆದ್ದಾಗ ಇಹಪರವನ್ನೇ ಮರೆಯುವರು ।
ತಾವೇ ದೇವೇಂದ್ರ ಎಂದು ತಿಳಿಯುವರು ॥

## ಸತ್ಯ

ಮೀರದಿರು ಗೆಳೆಯ ಹಿರಿಯರ ಮಾತು ।
ಕೇಳದಿರು ಪರರ ಚಾಡಿಯ ಮಾತು ॥
ಹೇಳುವೆನು ಕೇಳು ನಿನಗೊಂದು ಮಾತು ।
ಸತ್ಯವನು ನುಡಿಯುವುದೇ ಒಳಿತು ॥

— ಬೀಬಿ ನಜೀನ ಚಂದಾವರ
I P. U. C.

ಸ್ಥಾಪನೆ : 1953]  ನಮ್ಮ ಪೋಷಕ ಸಂಸ್ಥೆ  [ಮುಖ್ಯ ಕಛೇರಿ : ಅಂಕೋಲಾ

# ಕೆನರಾ ವೆಲ್‌ಫೇರ್ ಟ್ರಸ್ಟ, ಅಂಕೋಲಾ

ಇದು ಈ ಕೆಳಗಿನ ಸಂಸ್ಥೆಗಳನ್ನು ನಡೆಸುತ್ತಿದೆ.

## ಕಾಲೇಜುಗಳು :

| | | |
|---|---|---|
| ೧. | ಗೋಖಲೆ ಸೆಂಟಿನರಿ ಕಾಲೇಜ, ಅಂಕೋಲಾ | ಅಂಕೋಲಾ |
| ೨. | ದಿವೇಕರ ಕಾಮರ್ಸ ಕಾಲೇಜ, ಕಾರವಾರ | ಕಾರವಾರ |

## ಪದವಿಪೂರ್ವ ಕಾಲೇಜುಗಳು :

| | | |
|---|---|---|
| ೩. | ಪ. ಪೂ. ಕಾಲೇಜ, ದಾಂಡೇಲಿ | ಹಳಿಯಾಳ |
| ೪. | ಪ. ಪೂ. ಕಾಲೇಜ, ಕಡತೋಕಾ | ಹೊನ್ನಾವರ |
| ೫. | ಪ. ಪೂ. ಕಾಲೇಜ, ಶಿರಾಲಿ | ಭಟ್ಕಳ |
| ೬. | ಪ. ಪೂ. ಕಾಲೇಜ, ಅಂಕೋಲಾ | ಅಂಕೋಲಾ |

## ಮಾಧ್ಯಮಿಕ ಶಾಲೆಗಳು :

| | | |
|---|---|---|
| ೭. | ಪೀಪಲ್ಸ ಮಲ್ಟಿಪರ್ಪಸ್ ಹೈಸ್ಕೂಲ್, ಅಂಕೋಲಾ | ಅಂಕೋಲಾ |
| ೮. | ಜನತಾ ವಿದ್ಯಾಲಯ, ಬಾಡ ಕಾಗಾಲ | ಕುಮಟಾ |
| ೯. | ಜನತಾ ವಿದ್ಯಾಲಯ, ಶಿರಾಲಿ | ಭಟ್ಕಳ |
| ೧೦. | ಜನತಾ ವಿದ್ಯಾಲಯ, ದಾಂಡೇಲಿ | ಹಳಿಯಾಳ |
| ೧೧. | ಜನತಾ ವಿದ್ಯಾಲಯ, ಕಡತೋಕಾ | ಹೊನ್ನಾವರ |
| ೧೨. | ಜನತಾ ವಿದ್ಯಾಲಯ, ಕಡವಾಡ | ಕಾರವಾರ |
| ೧೩. | ಜನತಾ ವಿದ್ಯಾಲಯ, ಕಾಸರಕೋಡ | ಹೊನ್ನಾವರ |
| ೧೪. | ಜನತಾ ವಿದ್ಯಾಲಯ, ಮುರ್ಡೇಶ್ವರ | ಭಟ್ಕಳ |
| ೧೫. | ಜನತಾ ವಿದ್ಯಾಲಯ, ಮಿರ್ಜಾನ-ಕೋಡಕಣಿ | ಕುಮಟಾ |
| ೧೬. | ಜನತಾ ವಿದ್ಯಾಲಯ, ಅರಗಾ | ಕಾರವಾರ |
| ೧೭. | ಜನತಾ ವಿದ್ಯಾಲಯ, ಧಾರೇಶ್ವರ | ಕುಮಟಾ |
| ೧೮. | ಜನತಾ ವಿದ್ಯಾಲಯ, ಬೇಡ್ಕಣಿ | ಸಿದ್ದಾಪುರ |
| ೧೯. | ಶ್ರೀಮತಿ ಕಮಲಾಬಾಯಿ ಪಿಕಳೆ ಹೈಸ್ಕೂಲ್, ಕತಗಾಲ | ಕುಮಟಾ |
| ೨೦. | ಜನತಾ ವಿದ್ಯಾಲಯ, ಅನಿಲಗೋಡ | ಹೊನ್ನಾವರ |
| ೨೧. | ಜನತಾ ವಿದ್ಯಾಲಯ, ಕುಳ್ವೆ-ಬರೂರು | ಶಿರಸಿ |

## ಇತರ ಶೈಕ್ಷಣಿಕ ಸಂಸ್ಥೆಗಳು :

| | | |
|---|---|---|
| ೨೨. | ಇಂಗ್ಲೀಷ ಮೀಡಿಯಂ ಸ್ಕೂಲ್, ದಾಂಡೇಲಿ | ಹಳಿಯಾಳ |
| ೨೩, | ಕಂಪ್ಯೂಟರ್ ಟ್ರೇನಿಂಗ್ ಸೆಂಟರ್, ಕಾರವಾರ | ಕಾರವಾರ |
| ೨೪. | ಕಂಪ್ಯೂಟರ್ ಟ್ರೇನಿಂಗ್ ಸೆಂಟರ್, ಅಂಕೋಲಾ | ಅಂಕೋಲಾ |
| ೨೫. | ಹೊಲಿಗೆ ಶಿಕ್ಷಣ ಶಾಲೆ, ಅಂಕೋಲಾ | ಅಂಕೋಲಾ |
| ೨೬. | ಹೊಲಿಗೆ ಶಿಕ್ಷಣ ಶಾಲೆ ಮತ್ತು ಬಾಲಮಂದಿರ, ಮುಂಡಗೋಡ | ಮುಂಡಗೋಡ |
| ೨೭. | ನರ್ಸರಿ ಸ್ಕೂಲ್, ದಾಂಡೇಲಿ | ಹಳಿಯಾಳ |
| ೨೮. | ದಿನಕರ ಕಲಾನಿಕೇತನ, ಅಂಕೋಲಾ | ಅಂಕೋಲಾ |
| ೨೯. | ದಿನಕರ ಕಲಾನಿಕೇತನ, ಕಾರವಾರ | ಕಾರವಾರ |
| ೩೦. | ಸತ್ಯಸಾಯಿ ಬಾಲವಾಡಿ ಮತ್ತು ಬಾಲವಿಕಾಸ | ಕೋಡಿಭಾಗ |

## ಸಾಮಾಜಿಕ ಸೇವಾ ಸಂಸ್ಥೆ :

| | | |
|---|---|---|
| ೩೧. | ಥಕ್ಕರ್‌ಬಾಬಾ ಸೇವಾ ಕೇಂದ್ರ, ಅಂಕೋಲಾ | ಅಂಕೋಲಾ |